## ಪಂಚಮ

### ವಿಶೇಷ ಸಂಚಿಕೆ

### ದಲಿತರು ಮತ್ತು ರೈತಚಳುವಳಿ

- ಕರ್ನಾಟಕ ಹಳ್ಳಿ ಹಳ್ಳಿಗಳಿಗೆ ತೀವ್ರವಾಗಿ ಹಬ್ಬುತ್ತಿರುವ ರೈತಚಳುವಳಿ ದಲಿತರನ್ನು, ಕೃಷಿಕಾರ್ಮಿಕರನ್ನು ತಲುಪುತ್ತಿದೆಯೆ ?
- ದಲಿತ ಚಳುವಳಿ ರೈತ ಚಳಿವಳಿಗೆ ಸವಾಲಾಗಿದೆಯೆ ?
- ಜಾತಿ ವ್ಯವಸ್ಥೆಯಿಂದ ಛಿದ್ರಗೊಂಡಿರುವ ರೈತ ಸಮುದಾಯವನ್ನು ಒಗ್ಗೂಡಿಸಲು ರೈತ ಸಂಘಕ್ಕೆ ಕಾರ್ಯಕ್ರಮಗಳಿವೆಯೆ ?

ಇಂಥ ಹತ್ತಾರು ಪ್ರಶ್ನೆಗಳ ಬಗ್ಗೆ ಹಲವಾರು ಚಿಂತನೆ ಸಮೀಕ್ಷೆ, ಚರ್ಚೆ, ಸಂದರ್ಶನ, ವರದಿ, ಲೇಖನ ಇತ್ಯಾದಿಗಳನ್ನೊಳಗೊಂಡು ಜೂನ್ ತಿಂಗಳ ಪಂಚಮ ಪತ್ರಿಕೆಯು ರೈತ ಚಳುವಳಿ ಕುರಿತ ವಿಶೇಷ ಸಂಚಿಕೆಯಾಗಿ ಹೊರಬರಲಿದೆ.

ಈ ಬಗ್ಗೆ ಓದುಗರು ತಮ್ಮ ಅನುಭವ, ಅಭಿಪ್ರಾಯ, ಚಿಂತನೆಗಳನ್ನು ಚಿಕ್ಕದಾಗಿ ಬರೆದು ಮೇ 20ರ ಒಳಗೆ ನಮ್ಮ ಕೈಸೇರುವಂತೆ ಕಳುಹಿಸಿರಿ ಎಂದು ವಿನಂತಿಸುತ್ತೇವೆ.

—ಸಂಪಾದಕ

# ದಿಟ್ಟ ದಲಿತ ಪತ್ರಕರ್ತನ ಮೇಲೆ ಹಲ್ಲೆ

ಮಂಡ್ಯದ ದಿಟ್ಟ ದಲಿತ ಪತ್ರಕರ್ತ ಶ್ರೀಪುಟ್ಟರಾಮುರವರು ಕೊಲೆಯಿಂದ ತಪ್ಪಿಸಿಕೊಂಡಿದ್ದಾರೆ. ಬಲಿಷ್ಠವಾದ ಪುಟ್ಟರಾಮುರ ದೇಹ ಭೂಮಾಲೀಕರ ಗೂಂಡಾ ಹೊಡೆತಕ್ಕೆ ಸಿಕ್ಕಿ ಜರ್ಝರಿತವಾಗಿದೆ. ಎದುರಾ ಬದುರಾ ಬಂದರೆ ಹತ್ತು ಜನರನ್ನೂ ಹೊಡೆಯಬಲ್ಲ ಪುಟ್ಟರಾಮುರಿಗೆ ಗೂಂಡಾಗಳು ಹಿಂದಿನಿಂದ 'ಭೂಮಿಯಲ್ಲಿ ಹುಟ್ಟಿಕೊಂಡಂತೆ' ಬಂದು ಚಚ್ಚಿ ಹುಲ್ಲು ಮೆದೆಗೆ ಹಾಕಿ ಬೆಂಕಿ ಹಚ್ಚುವ ಪ್ರಯತ್ನ ನಡೆಸಿದ್ದರೂ ಮಂಡ್ಯ ಜಿಲ್ಲಾ ಪೋಲೀಸ್ ಸೂಪರಿಂಟೆಂಡೆಂಟ್ ಎನ್ನಿಸಿಕೊಳ್ಳುವಾತ ಕೊಲೆ ಮೊಕದ್ದಮೆ ಕೇಸು ಹಾಕದೆ ಹೊಡೆದು ಹುಲ್ಲು ಮೆದೆಗೆ ಹಾಕಿದರು ನಿಜ, ಆದರೆ ಬೆಂಕಿ ಕಡ್ಡಿ ಗೀರಿದ್ದರೆ ?' ಎಂದು ಕ್ರೂರತೆ ತೋರಿಸಿದ್ದಾನೆ. ಈ ಕ್ರೂರತೆಯನ್ನು ದಲಿತ ಸಂಘರ್ಷ ಸಮಿತಿಯಾದಿಯಾಗಿ ಪ್ರಗತಿಪರ ಸಂಘಟನೆಗಳು ಪ್ರತಿಭಟಿಸಬೇಕಾಗಿದೆ. ಶ್ರೀ ಪುಟ್ಟರಾಮುರವರು ಯಾವ ಭೂಸಮಸ್ಯೆಗಾಗಿ ದನಿ ಎತ್ತಿ ಏಟು ತಿಂದರೋ ಆ ಭೂ ಸಮಸ್ಯೆಯನ್ನು ಬಗೆಹರಿಸಲೂ ಹೋರಾಡಬೇಕಾಗಿದೆ.

—ಸಂಪಾದಕ



ತಮ್ಮ ಹರಿತವಾದ, ನಿರ್ಭಯವಾದ ಲೇಖನಗಳ ಮೂಲಕ ರಾಜಕಾರಣಿಗಳಿಗೆ, ಅಧಿಕಾರಿಗಳಿಗೆ, ಶೋಷಕರಿಗೆ ಸಿಂಹಸ್ವಪ್ನವಾಗಿದ್ದ ಮಂಡ್ಯ ನಗರದ ಖ್ಯಾತ ಪತ್ರಿಕೋದ್ಯಮಿ ದಾರಿದೀಪ ಸಂಪಾದಕರಾದ ಎಸ್. ಪುಟ್ಟರಾಮುರವರನ್ನು 20-4-83 ರ ರಾತ್ರಿ ಕೊಲ್ಲುವ ಯತ್ನ ನಡೆದು, ತೀವ್ರಸ್ವರೂಪದ ಗಾಯಗಳಿಂದ ಆಸ್ಪತ್ರೆ ಸೇರಿರುವ ಸಂಗತಿ ಆಗದವರಿಗೆ ಹಿತವೆನಿಸಿದರೂ ಅಪಾರ ಸಂಖ್ಯೆಯ ಹಿತೈಷಿಗಳಿಗಂತು ಆಘಾತದ ಸುದ್ದಿ. ಪುಟ್ಟರಾಮುರವರು ತಮ್ಮ ನಿರ್ಭಯ, ನಿಷ್ಠುರ ಪತ್ರಿಕೋದ್ಯಮದಿಂದ ಮಿತ್ರರಿಗಿಂತ ಶತ್ರುಗಳನ್ನು ಹೆಚ್ಚಾಗಿ ಪಡೆದರು. ಪುಟ್ಟರಾಮು ದಲಿತ ವರ್ಗದಿಂದ ಬಂದ ಪ್ರಜ್ಞಾವಂತ ಪತ್ರಿಕೋದ್ಯಮಿ. ದಲಿತ ಜನಾಂಗದ ಮುಖವಾಣಿಯಂತಿದ್ದ 'ದಾರಿದೀಪ' ಪತ್ರಿಕೆಯು ಜಿಲ್ಲೆಯಾದ್ಯಂತ ದಲಿತರ ಕೊಲೆ–ಸುಲಿಗೆ, ಭೂವಿವಾದಗಳ ಮೇಲೆ ಮಹತ್ವಪೂರ್ಣ ಲೇಖನಗಳನ್ನು ಪ್ರಕಟಿಸುತ್ತ ದಲಿತ ಜನಾಂಗದ ಆಶಾಕಿರಣ

(ನಾಲ್ಕನೇ ಪುಟಕ್ಕೆ)

ಪಂಚಮ

ಸಂಪುಟ : 7 ಸಂಚಿಕೆ : 10 5 – 20 ಮೇ 1983 ಬೆಲೆ : 50–ಪೈಸೆ ಪುಟ : 12

# ನಮ್ಮನ್ನು ನಡುಗಿಸಿದ ಜಾತಿ ಸಮ್ಮೇಳನ

ಏಪ್ರಿಲ್ 24, 25 ರಂದು ಮೈಸೂರಿನ ದೊಡ್ಡಕೆರೆ ಮೈದಾನದ ಎಕ್ಸಿಬಿಷನ್ ಅಂಗಳದಲ್ಲಿ ನಡೆದ ಅಖಿಲ ಭಾರತ ವೀರಶೈವ ಸಮ್ಮೇಳನ ಜಾತಿ ವ್ಯವಸ್ಥೆಯಿಂದ ನೊಂದವರನ್ನೆಲ್ಲ ನಡುಗಿಸಿದೆ. ಯಾಕೆಂದರೆ ಜನರು ನಂಬಿದ್ದ ಕೊಂಚ ಪ್ರಜಾಪ್ರಭುತ್ವವಾದಿ ಜನತಾ ಸರ್ಕಾರವೇ ಮುಂದೆ ನಿಂತು ಈ ಜಾತಿ ಸಮ್ಮೇಳನ ನಡೆಸಿದೆ. ತನ್ನ ಬೇಳೆ ಬೇಯಿಸಿಕೊಳ್ಳುವ ಸಲುವಾಗಿ ತಲೆಹಿಡಿಯಲೂ ಹೇಸದ ಹೆಗ್ಗಡೆ ಈ ಸಮ್ಮೇಳನದಲ್ಲಿ ಭಾಗವಹಿಸಿ ಈಗಾಗಲೇ ದಲಿತರನ್ನು ಜೀವಸಹಿತ ಹಿಂಡುತ್ತಿರುವ ಪ್ರಬಲ ಜಾತಿಗಳ ಕ್ರೌರ್ಯಕ್ಕೆ ಕುಮ್ಮಕ್ಕು ಕೊಟ್ಟಿದ್ದಾರೆ. ಲಿಂಗಾಯಿತರ ಈ ಒಗ್ಗಟ್ಟು ಮತ್ತು ಪ್ರಾಬಲ್ಯ ಕಂಡು ಒಕ್ಕಲಿಗರು ಮತ್ತು ಬ್ರಾಹ್ಮಣರು ಈಗಾಗಲೇ ಕರುಬತೊಡಗಿದ್ದಾರೆ. ಜೀವ ಉಳಿಸಿಕೊಳ್ಳಲು ಜನರಿಗೆ ನೀರಿಲ್ಲದಿರುವಾಗ ಅಂದು ಮೈಸೂರು ರಸ್ತೆಗಳ ಶೋಕಿ ಚಿಲುಮೆಗಳಲ್ಲಿ ನೀರು ಚಿಮ್ಮುತ್ತಿದ್ದುದೂ, ಪವರ್‌ಕಟ್ ಎಂದು ಗೋಳಿಡುವ ಸರ್ಕಾರವೇ ಅಂದು ಮೈಸೂರು ನಗರವನ್ನು ಲೈಟುಗಳಿಂದ ಸಿಂಗರಿಸಿದ್ದುದೂ ನಮ್ಮ ಜನರ ಹಸಿವು ಬಡತನ ಅವಮಾನಗಳನ್ನು ವ್ಯಂಗ್ಯಮಾಡಿದೆ ; ಮತ್ತು ಜಾತೀಯ ದಬ್ಬಾಳಿಕೆಗಳನ್ನು ಸಾರ್ವಜನಿಕಗೊಳಿಸಿದೆ. ಹಾಗಾದರೆ ಜಾತೀಯತೆಯಿಂದ ನಾರುತ್ತಿರುವ ಈ ಭಾರತದಲ್ಲಿ ಜಾತ್ಯಾತೀತ ಪ್ರಜಾಪ್ರಭುತ್ವ ಕಟ್ಟಬಲ್ಲವರು ಯಾರು ?

—ಸಂಪಾದಕ

## ಪೋಲೀಸು ಪಹರೆಯಲ್ಲಿ ಪ್ರತಿಭಟನಾ ಮೆರವಣಿಗೆ

ಪುಟ್ಟರಾಮುಅವರ ಮೇಲೆ ನಡೆದ ಹಲ್ಲೆಯನ್ನು ಪ್ರತಿಭಟಿಸಿ ಮಂಡ್ಯ ದಲಿತ ಸಂಘರ್ಷ ಸಮಿತಿಯು ಏಪ್ರಿಲ್ 25 ರಂದು ಮಂಡ್ಯದಲ್ಲಿ ಪ್ರತಿಭಟನಾ ಮೆರವಣಿಗೆಯನ್ನು ನಡೆಸಿತು. ಹಸಿರು ಜಿಲ್ಲೆಯ ಹಲ್ಲೆಕೋರರನ್ನು ನಡುಗಿಸುವಂತೆ ನಡೆದ ಈ ಮೆರವಣಿಗೆಯನ್ನು ಪುಟ್ಟರಾಮು ಮೇಲಿನ ಹಲ್ಲೆಗೆ ಕಣ್ಣು ಮುಚ್ಚಿ ಕುಳಿತಿದ್ದ ಪೋಲೀಸರು ದಂಡಿ ದಂಡಿಯಾಗಿ ಸುತ್ತುವರಿದಿದ್ದರು.

# ಈಗ ಬಿಡುಗಡೆಯಾಗಿದೆ

## ಲೇಖನಗಳು ಮತ್ತು ಮುನ್ನುಡಿಗಳು

ಲೇಖಕ : **ಗೋಪಾಲಕೃಷ್ಣ ಅಡಿಗ**

1978 ರಲ್ಲಿ ತಮ್ಮ 'ಸಮಗ್ರ ಗದ್ಯ' ಪ್ರಕಟವಾದ ಬಳಿಕ ಅಡಿಗರು ಇಂದಿನ ರಾಜಕೀಯ, ಸಾಮಾಜಿಕ ಪರಿಸ್ಥಿತಿ, ಶಿಕ್ಷಣ, ಸಾಹಿತ್ಯಿಕ ಸಂದರ್ಭ ಮೊದಲಾದ ವಿಷಯಗಳ ಬಗ್ಗೆ ಬರೆದ ಲೇಖನಗಳು ಇದರಲ್ಲಿವೆ. ಜೊತೆಗೆ ಅನಂತಮೂರ್ತಿ, ಲಂಕೇಶ್, ಚಂದ್ರಶೇಖರ ಕಂಬಾರ, ದಿವಂಗತ ಯರ್ಮುಂಜರಾಮಚಂದ್ರ ಮೊದಲಾದ ಲೇಖಕರ ಬಗ್ಗೆ, ಆಯಾ ಲೇಖಕರ ಲೇಖಕ–ಜೀವನದ ಮೊದಲಲ್ಲಿ ಬರೆದ ಬರಹಗಳನ್ನೂ ಈ ಸಂಗ್ರಹ ಒಳಗೊಂಡಿದೆ.

ಬೆಲೆ : **ರೂಪಾಯಿ ಹದಿನೈದು**

## ದುಡಿಯುವವರ ದನಿ ಮತ್ತು ಇತರ ಲೇಖನಗಳು

ಲೇಖಕ : **ಎಸ್. ವೆಂಕಟರಾಂ**

ದಿವಂಗತ ಎಸ್. ವೆಂಕಟರಾಂ ದೊಡ್ಡ ಮಟ್ಟದ ಕಾರ್ಮಿಕ ನಾಯಕರಾಗಿದ್ದಂತೆ ನುರಿತ ಬರಹಗಾರರೂ ಆಗಿದ್ದರು. ಕನ್ನಡದ ಕೆಲವು ಸಾಹಿತ್ಯ ಕೃತಿಗಳು, ದಾಸ್ಯವಸ್ಥೆ ನಮ್ಮ ಪತ್ರ ಪುಸ್ತಕಗಳು, ಭೂಸುಧಾರಣೆ ಮೊದಲಾದ ವಿಷಯಗಳ ಬಗ್ಗೆ ಅವರು ಬರೆದ ಲೇಖನಗಳು ಈ ಸಂಗ್ರಹದಲ್ಲಿವೆ. ನಮ್ಮ ಯೋಚನಾ ಕ್ರಮಕ್ಕೆ ಹೊಸ ತಿರುವು ಕೊಡಬಲ್ಲ ಲೇಖನಗಳು ಇವು.

ಬೆಲೆ : **ರೂಪಾಯಿ ಹದಿನಾರು**

## ಕೋತಿಯ ಆಸೆ

### ಮಕ್ಕಳ ಕತೆಗಳು

ಮಕ್ಕಳಿಗಾಗಿ ರಚಿತವಾದ ಈ ಪ್ರಾಣಿ ಕಥೆಗಳನ್ನು ವಿವಿಧ ಲೇಖಕರು ಬರೆದಿದ್ದಾರೆ. ಸುಮಾರು ಅರವತ್ತು ಪುಟಗಳು, ಗುಜ್ಜಾರಪ್ಪ ಬರೆದ ಸುಂದರ ಚಿತ್ರಗಳನ್ನೊಳಗೊಂಡ ಈ ಪುಸ್ತಕದಲ್ಲಿ ಒಟ್ಟು ಹನ್ನೆರಡು ಕತೆಗಳಿವೆ.

ಬೆಲೆ : **ರೂಪಾಯಿ ಎರಡು**

## ತದ್ರೂಪಿ (ನಾಟಕ)

ಲೇಖಕ : **ಪ್ರಸನ್ನ**

ಬೆಲೆ : **ಏಳು ರೂಪಾಯಿಗಳು**



ಪ್ರಿಂಟರ್ಸ್ ಪ್ರಕಾಶನ
75, ಮಹಾತ್ಮಗಾಂಧಿ ರಸ್ತೆ, ಬೆಂಗಳೂರು-560001

# ಪರಿಶುದ್ಧ ಹಸ್ತದ ಜಿಲ್ಲಾಧಿಕಾರಿ: ಪಿ. ಪುಟ್ಟರಂಗಪ್ಪ

1978 ರ ಒಂದು ದಿನ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿದ್ದ ಶ್ರೀವಿಜಯಸಾಸನೂರರನ್ನು ಭೇಟಿಮಾಡಿದ ಸಂದರ್ಭ. ಶಿವಮೊಗ್ಗೆಯಿಂದ ಬಂದ ಟ್ರಂಕಾಲಿನಲ್ಲಿ ಸುಧೀರ್ಘ ಸಂಭಾಷಣೆಯಲ್ಲಿ ತೊಡಗಿದ್ದರು. "ಕ್ಷಮಿಸಿ ನಿಮ್ಮೊಡನೆ ಮಾತಾಡಲು ತಡವಾಯಿತು. ಶಿವಮೊಗ್ಗೆಯ ವಿಶೇಷ ಜಿಲ್ಲಾಧಿಕಾರಿಗಳೊಡನೆ ಮಾತಾಡುತ್ತಿದ್ದೆ—ಪುಟ್ಟರಂಗಪ್ಪನವರೊಡನೆ. ನಿಮಗೆ ಗೊತ್ತಲ್ಲ ಒಳ್ಳೆಯ ವ್ಯಕ್ತಿಗಳು, ಜನಪ್ರಿಯ ಅಧಿಕಾರಿ· ಸಾಂಸ್ಕೃತಿಕ ಕಾರ್ಯಕ್ರಮದ ಸಲುವಾಗಿ ಚರ್ಚಿಸುತ್ತಿದ್ದೆ'' ಎಂದರು. ಪುಟ್ಟರಂಗಪ್ಪನವರ ಬಗ್ಗೆ ನಾನು ಹಿಂದೆಯೇ ಕೇಳಿದ್ದೆ.

'ಪುಟ್ಟರಂಗಪ್ಪ' ಅಲ್ಲ ಅವರೊಬ್ಬರು 'ದೊಡ್ಡರಂಗಪ್ಪ' ಎಂದೇ ಕರೆಸಿಕೊಳ್ಳುವಂಥ ದೊಡ್ಡದೊಡ್ಡ ಕೆಲಸ ಮಾಡಿ ಜನಪ್ರಿಯ ಅಧಿಕಾರಿಗಳಾಗಿದ್ದಾರೆ. ಓರ್ವ ದುರ್ಬಲ ವರ್ಗದಲ್ಲಿ ಹುಟ್ಟಿದ ಈ ಐ. ಎ. ಎಸ್. ಅಧಿಕಾರಿ ಪುಟ್ಟರಂಗಪನವರಿಂದ ಕನ್ನಡ ಜನತೆಗೆ ಸಂದ ಸೇವೆ ಅನುಪಮವಾದುದು.

ನಿರ್ಲಕ್ಷಿಸಲ್ಪಟ್ಟ ರಾಯಚೂರು ಜಿಲ್ಲೆಗೆ ಪುಟ್ಟರಂಗಪ್ಪನವರು ಜಿಲ್ಲಾಧಿಕಾರಿಗಳಾದರು. ಮೂರು ದಿನಗಳಲ್ಲಿ 240 ಕ್ಕೂ ಹೆಚ್ಚು ಹಳ್ಳಿಗಳನ್ನು ಸುತ್ತಾಡಿ ಜನಜೀವನದ ಜೀವನಾಡಿಯನ್ನು ಕಂಡು ನೊಂದು ಬಳಲಿದವರಿಗೆಲ್ಲ ನವಚೈತನ್ಯವನ್ನು ತುಂಬಿದರು. ಸರಕಾರಿ ಅಧಿಕಾರಿಗಳ ಮುಖವನ್ನೇ ಕಾಣದ ಜನರಿಗೆ ಪುಟ್ಟರಂಗಪ್ಪನವರ ದರ್ಶನ ತೃಪ್ತಿಕೊಟ್ಟಿತು. 'ಇದ್ದರೆ ಇಂಥ ಅಧಿಕಾರಿಗಳು ಇರಬೇಕು' ಎಂದು ಕೊಂಡಾಡಿದರು. ಜನರ ಕಷ್ಟ ಸುಖಗಳಲ್ಲಿ ಭಾಗಿಯಾದರು. ರಾಯಚೂರು ಜಿಲ್ಲೆಯ ಬಡಜನ ಇವರನ್ನು ದೇವರಂತೆ ಕಂಡರು. ಆ ಜನತೆಯ ಆಸೆ ಆಕಾಂಕ್ಷೆಯನ್ನು ನೆರವೇರಿಸುವಷ್ಟರಲ್ಲಿ ಭ್ರಷ್ಟಾಚಾರಕ್ಕೆ ಬಲಿಬೀಳದ ದಿಟ್ಟ ಅಧಿಕಾರಿ ಪುಟ್ಟರಂಗಪ್ಪನವರನ್ನು ವರ್ಗ ಮಾಡಲಾಯಿತು. ಈ ಸುದ್ದಿಗೆ ರಾಯಚೂರು ಜಿಲ್ಲೆಯ ಇಡೀ ಜನತೆ ತತ್ತರಿಸಿತು. ಅಭಿವೃದ್ಧಿಯನ್ನೇ ಕಾಣದ ಈ ಜಿಲ್ಲೆಯನ್ನು ಪ್ರಗತಿಯ ಸುಳಿಗೆ ತಂದು ನಿಲ್ಲಿಸಿ ಇಲ್ಲೂ ಸರಕಾರ ಇದೆ ಎನ್ನುವುದನ್ನು ತೋರಿಸಿಕೊಟ್ಟ ಕೀರ್ತಿ ಪುಟ್ಟರಂಗಪ್ಪನವರದು. ಇವರ ದಕ್ಷತೆಗೆ ಪ್ರಾಮಾಣಿಕತೆಗೆ ಇನ್ನೊಂದು ಘಟನೆ ನೆನಪಾಗುತ್ತದೆ. ರಾಯಚೂರು ಜಿಲ್ಲೆಯಿಂದ ಬಂದು ಹುಬ್ಬಳ್ಳಿ ಧಾರವಾಡ ಪುರಸಭಾ ಕಮೀಷನರ್ ಆಗಿ ಅಧಿಕಾರ ವಹಿಸಿಕೊಂಡರು. ಹಗಲಿರುಳೆನ್ನದೆ ಜನರ ಹಿತಾಸಕ್ತಿಗಾಗಿ ದುಡಿಯತೊಡಗಿದರು. ಆದರೆ, ಕೇವಲ ಕೆಲವೇ ತಿಂಗಳಲ್ಲಿ ಮತ್ತೆ ಇವರನ್ನು ಬೇರೆಡೆಗೆ ವರ್ಗ ಮಾಡಿರುವುದನ್ನು ಮುಖ್ಯಮಂತ್ರಿಗಳು ಹುಬ್ಬಳ್ಳಿಯಲ್ಲಿ ಪ್ರಕಟಿಸಿದರು. ಆಗ ಹುಬ್ಬಳ್ಳಿಯ ಇಡೀ ಹಿರಿಕಿರಿಯ ಪತ್ರಿಕೋದ್ಯಮಿಗಳೆಲ್ಲಾ ಪುಟ್ಟರಂಗಪ್ಪನವರ ಪ್ರಾಮಾಣಿಕತೆ ದಕ್ಷತೆಯ ಬಗ್ಗೆ ತಳೆದ ಸದ್ಭಾವನೆ ಬಗ್ಗೆ ಮುಖ್ಯಮಂತ್ರಿಗಳು ಗಮನಿಸಿ ಸಂತೋಷಪಟ್ಟರು. ಮುಖ್ಯಮಂತ್ರಿಗಳು ಇವರನ್ನು ವರ್ಗ ಮಾಡಲು ನೀಡಿದ್ದ ಆದೇಶವನ್ನು ಸ್ಥಳದಲ್ಲೇ ರದ್ದುಗೊಳಿಸಿದರು. ಇದು ಪುಟ್ಟರಂಗಪ್ಪನವರಂಥ ಅಧಿಕಾರಿಗಳ ಪ್ರಾಮಾಣಿಕತನಕ್ಕೆ ಸಂದ ಅತಿ ದೊಡ್ಡ ಗೌರವ.



ಪುಟ್ಟರಂಗಪ್ಪನವರು ವಿಚಾರಶೀಲರು. ಜನಸಾಮಾನ್ಯರ ಸಮೀಪಕ್ಕೆ ಆಡಳಿತವನ್ನು ಒಯ್ದರು. ಆಡಳಿತ ವರ್ಗ ಚುರುಕುಗೊಳ್ಳುವಂತೆ ಕೆಲವು ದಿಟ್ಟತನದ ಕ್ರಮ ಕೈಗೊಂಡರು. ಬಡವರ ಓಣಿಗಳಿಗೆ ಕೊಳಚೆ ನಿರ್ಮೂಲನಕ್ಕೆ ಪೌರ ಸೌಲಭ್ಯಗಳನ್ನು ಕಲ್ಪಿಸಿದರು. ಈ ಅವಳಿ ಮಹಾನಗರಗಳ ಜನರ ಪ್ರೀತಿ ಗೌರವಕ್ಕೆ ಪಾತ್ರರಾದರು.

ಪಿ. ಆರ್. ತಿಪ್ಪೇಸ್ವಾಮಿ

ಪುಟ್ಟರಂಗಪ್ಪನವರು ಹಿಂದೆ 1973 ರಿಂದ 1978 ರಷ್ಟು ದೀರ್ಘ ಕಾಲ ಶಿವಮೊಗ್ಗೆ ಜಿಲ್ಲೆಯ ವಿಶೇಷ ಜಿಲ್ಲಾಧಿಕಾರಿಗಳಾಗಿದ್ದರು. ಈ ಅವಧಿಯಲ್ಲಿ 1 ಲಕ್ಷ 50 ಸಾವಿರ ಎಕರೆ ಭೂಮಿಯನ್ನು ಭೂಹೀನರಿಗೆ ಇವರು ದೊರಕಿಸಿಕೊಟ್ಟರು. 500 ಎಕರೆ ಪ್ರದೇಶವನ್ನು ಡಾ. ಅಂಬೇಡ್ಕರ್ ಸಂಸ್ಥೆಗೆ ಮಂಜೂರು ಮಾಡಿದರು.

1971 ರಿಂದ 1973 ರ ತನಕ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಕಾರ್ಪೊರೇಷನ್ನಿನ ಜನರಲ್ ಮೇನೇಜರ್ ಆಗಿದ್ದರು. ಇಲ್ಲಿ ಸೋರಿ ಹೋಗುತ್ತಿದ್ದ ಕೆಲವು ಬಾಬುಗಳಿಗೆ ದಿಟ್ಟತನದಿಂದ ಕ್ರಮಕೈಕೊಂಡರು. ಇದರಿಂದಾಗಿ ಎರಡು ಕೋಟಿ ರೂಪಾಯಿಗಳಿಗೂ ಹೆಚ್ಚು ಆದಾಯ ಬರುವಂತಾಯಿತು.

ಇದಕ್ಕೆ ಇವರ ಸ್ವಚ್ಛ ಹಸ್ತವೇ ಕಾರಣ. ಅಂದಿಗೆ ಗೌವರ್ನರ್ ಧರ್ಮವೀರರ ಪ್ರಶಂಸೆಗೂ ಪಾತ್ರರಾದರು. ಪುಟ್ಟರಂಗಪ್ಪನವರು ಕಟ್ಟ ಕನ್ನಡಾಭಿಮಾನಿಗಳು. ಅವರು ಅಧಿಕಾರಿಯಾಗಿದ್ದ ಪ್ರತಿ ಜಿಲ್ಲೆಯಲ್ಲೂ ಕನ್ನಡ ಆಡಳಿತ ಭಾಷೆಯಾಗಿ ಮೆರೆಯುವಂತೆ ಮಾಡಿದರು. ಇದರ ಸಲುವಾಗಿ ಕರ್ನಾಟಕ ಸರಕಾರ ಇವರಿಗೆ ಬಹುಮಾನ ನೀಡಿ ಗೌರವಿಸಿತು.

ಈಗ ಬೆಂಗಳೂರು ಜಿಲ್ಲೆಯ ಜಿಲ್ಲಾಧಿಕಾರಿಗಳಾಗಿರುವ ಪುಟ್ಟರಂಗಪ್ಪನವರು ಯಾರ ಪ್ರಭಾವಕ್ಕೂ ಬಲಿಯಾಗುವವರಲ್ಲ. ಅರ್ಹತೆ ನ್ಯಾಯಕ್ಕೆ ಬೆಲೆಕೊಡುವವರು. ಚಿಕ್ಕಮಗಳೂರು ಜಿಲ್ಲೆ ಅಜ್ಜಂಪುರ ಇವರ ಹುಟ್ಟೂರು. 1930 ರಲ್ಲಿ ಜನನ. ತಂದೆ ದಿ|| ಎ. ಪಾಂಡುರಂಗಪ್ಪ. ಸ್ವಾತಂತ್ರ್ಯ ಹೋರಾಟಗಾರರು. ಚಿತ್ರದುರ್ಗ ಜಿಲ್ಲೆಯ ಐಮಂಗಲ ಖಾದಿ ಕೇಂದ್ರದಲ್ಲಿ ಸೇವೆ ಸಲ್ಲಿಸಿದ ಸುಸಂಸ್ಕೃತ ವ್ಯಕ್ತಿ. ಆದರ್ಶ ಬಾಳನ್ನು ಬಾಳಿದ ಇವರು ತಮ್ಮ ಮೂರು ಜನ ಪುತ್ರರ ವಿದ್ಯಾಭ್ಯಾಸಕ್ಕೆ ವಿಶೇಷ ಗಮನ ಕೊಟ್ಟರು. ಹರಿಜನ ವರ್ಗದಿಂದ ಜನಿಸಿ ಅತಿ ಕಷ್ಟದಿಂದ ವ್ಯಾಸಂಗ ಮಾಡಿ ಪರಿಶ್ರಮ ಸ್ವಪ್ರಯತ್ನದಿಂದ ಮೇಲೇರಿ ಬಂದ ತಮ್ಮ ಪುತ್ರರ ಬಗ್ಗೆ ತಂದೆ ಪಾಂಡುರಂಗಪ್ಪನವರಿಗೆ ತೃಪ್ತಿ, ಸಂತೋಷ ಕೂಡ.

ಪುಟ್ಟರಂಗಪ್ಪನವರು ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ (1956) ವ್ಯಾಸಂಗ, ಬಿ. ಎ. ಪದವೀಧರರು. 1957 ರಲ್ಲಿ ಚಿತ್ರದುರ್ಗ ಪ್ರೌಢಶಾಲಾ ಶಿಕ್ಷಕರಾಗಿದ್ದರು. 1958 ರಲ್ಲಿ ಸರಕಾರಿ ಇಲಾಖೆಯಲ್ಲಿ ನೌಕರಿ ಮಾಡಿದರು. 1962 ರಲ್ಲಿ 'ಕ್ಲಾಸ್ ಒನ್ ಪ್ರೊಬೇಶನರ್' ಎಂದು ಆಯ್ಕೆಗೊಂಡರು. ಸರಕಾರಿ 'ಅಕೌಂಟ್ಸ್ ಇಲಾಖೆ' ಯಲ್ಲಿ ಸೇವೆ ಪ್ರಾರಂಭ. 1959 ರಲ್ಲಿ ಅಸಿಸ್ಟೆಂಟ್ ಕಮಿಷನರ್ ತರೀಕೆರೆಯಲ್ಲಿ. ಅಲ್ಲಿಂದ ಚಿಕ್ಕಮಗಳೂರು ಜಿಲ್ಲೆಗೆ ಬಂದರು. ಅಲ್ಲಿ ಕಾರ್ಯನಿರ್ವಾಹಕ ಜಿಲ್ಲಾಧಿಕಾರಿ. 1971 ರಲ್ಲಿ ಈ ದಕ್ಷ ಅಧಿಕಾರಿ ಗೌವರ್ನರ್ ಶ್ರೀ ಧರ್ಮವೀರರ ಗಮನ ಸೆಳೆದರು. ಇದು ಇವರನ್ನು ರಸ್ತೆ ಸಾರಿಗೆ ಸಂಸ್ಥೆಗೆ ಜನರಲ್ ಮೇನೇಜರ್ ಹುದ್ದೆಗೇರಿಸಿತು. ಈಗ ಬೆಂಗಳೂರು ಮಹಾನಗರ ಮತ್ತು ಜಿಲ್ಲೆಗೆ ಜಿಲ್ಲಾಧಿಕಾರಿಗಳಾಗಿ ಇವರನ್ನು ವರ್ಗಾಯಿಸಲಾಗಿದೆ. ಇಲ್ಲೂ ಇವರ ದಕ್ಷ ಆಡಳಿತವನ್ನು ಎಲ್ಲರೂ ಸ್ಮರಿಸುವಂತಾಗಿದೆ.

ನಡು ಬೈತಲೆ, ಬಟ್ಟ ಮುಖದ, ಎಣ್ಣೆಗೆಂಪಿನ ಆಕರ್ಷಕ ವ್ಯಕ್ತಿತ್ವದ ಶುದ್ಧ ಖಾದೀಧಾರಿ ಪುಟ್ಟರಂಗಪ್ಪನವರನ್ನು ಕಂಡ ಜನತೆ 'ದೈವಭಕ್ತ, ಗಾಂಧೀವಾದಿ, ದೀನ ಬಡವರ ಬಂಧು, ಬಂಗಾರದಂಥ ಮನುಷ್ಯ' ಎಂದೆಲ್ಲಾ ಕೊಂಡಾಡುತ್ತಾರೆ. ಐವತ್ಮೂರರ ಹರೆಯದ ಪುಟ್ಟರಂಗಪ್ಪನವರ ಆದರ್ಶ ಜೀವನ, ಜನತಾ ಸೇವೆ ಅನುಕರಣೀಯ.

# ಪತ್ರಕರ್ತ ಪುಟ್ಟರಾಮು ಅವರ ಮೇಲೆ ಹಲ್ಲೆ ಕೊಲೆಯತ್ನ

(ಮೊದಲನೇ ಪುಟದಿಂದ)

ದಂತೆ ಕಾಣುತ್ತಿತ್ತು. ಮಂಡ್ಯದಲ್ಲಿ ಪುಟ್ಟರಾಮು ಒಂದು ಶಕ್ತಿಯಾಗಿ ಬೆಳೆದಿದ್ದರು. ಈ ಶಕ್ತಿಯ ನಿರ್ನಾಮಕ್ಕೆ ಇಲ್ಲಿನ ಶೋಷಕ ವರ್ಗ ಹೊಂಚು ಹಾಕಿತ್ತೇನೋ ಎನ್ನುವಂತೆ 20-4-83 ರ ಘಟನೆ ಸ್ಫೋಟಗೊಂಡಿದೆ.

ತಾವು ವಾಸವಾಗಿರುವ ಮರಕಾಡುದೊಡ್ಡಿಯ ಮನೆಯ ಪಕ್ಕದಲ್ಲಿಯೇ ಇವರಿಗೆ ದರಖಾಸ್ತು ಮೂಲಕ ಸರ್ಕಾರದಿಂದ ಜಮೀನು ಮಂಜೂರಾದದ್ದು ಅಲ್ಲಿನ ಸವರ್ಣೀಯರಿಗೆ ನುಂಗಲಾರದ ತುತ್ತಾಯಿತು. ಈ ಬಗ್ಗೆ ಕೋರ್ಟಿನಲ್ಲಿ ವಿವಾದ ನಡೆದು, ಅಸಿಸ್ಟೆಂಟ್ ಕಮೀಷನರ್‌ರವರು ಜಮೀನನ್ನು ಪುಟ್ಟರಾಮುರವರಿಗೆ ಕೊಟ್ಟಿರುವುದು ನ್ಯಾಯಸಮ್ಮತವೆಂದು ತೀರ್ಪಿತ್ತರು. ಇದು ಇನ್ನಷ್ಟು ಸಹಿಸಲಾರದ ವಿಷಯವಾದಕೆ, ಇದೇ ಮರಕಾಡುದೊಡ್ಡಿಗೆ ಹೊಂದಿಕೊಂಡಿರುವ ಗುತ್ತಲು ಸರ್ವೆ ನಂ. 54ರಲ್ಲಿ ಇಪ್ಪತ್ತು ವರ್ಷಗಳ ಹಿಂದೆ ದಲಿತರಿಗೆ ಮಂಜೂರಾಗಿದ್ದ ಜಮೀನನ್ನು ಅಕ್ರಮವಾಗಿ ಬಗುರ್ ಹುಕುಂ ಹೆಸರಿನಲ್ಲಿ ಸಾಗುವಳಿ

## ವಿಶೇಷ ವರದಿ

ಮಾಡುತ್ತ ಬಂದಿದ್ದ ದಬ್ಬಾಳಿಕೆಯನ್ನು ಮುಖ್ಯಮಂತ್ರಿಯವರ ಗಮನ ಸೆಳೆಯುವಂತೆ ತಮ್ಮ ದಾರಿದೀಪದ 23-3-83 ರ ಸಂಚಿಕೆಯಲ್ಲಿ ಪ್ರಕಟಿಸಿದ್ದು ನಾಥೇಗೌಡ, ಮೊಳ್ಳಯ್ಯ ಮುಂತಾದ ಸವರ್ಣೀಯ ಭೂಮಾಲೀಕರಿಗೆ ಪ್ರತಿಷ್ಠೆಯ ವಿಷಯವಾಯಿತು. ಪುಟ್ಟರಾಮುರವರಿಗೆ ಸರಿಯಾದ 'ಪಾಠ' ಕಲಿಸುವುದಕ್ಕೆ ಸಿದ್ಧತೆಯನ್ನು ಇಲ್ಲಿಂದ ಪ್ರಾರಂಭಿಸಿದರು.

31-3-83 ರ ರಾತ್ರಿ ದಾರಿದೀಪ ಸಂಪಾದಕರ ಮನೆಯ ಮೇಲೆ ದಾಳಿ ಮಾಡಿ ಅವರ ಹೆಂಡತಿ, ಮಕ್ಕಳನ್ನು ಕುಡುಗೋಲು ದೊಣ್ಣೆಯಿಂದ ಥಳಿಸಿದರು. ಪ್ರೆಸ್ಸಿನ ಕೆಲಸ ಮುಗಿಸಿ ಮಂಡ್ಯದಿಂದ ರಾತ್ರಿ ಮನೆಗೆ ಬಂದ ಪುಟ್ಟರಾಮುರವರ ಮೇಲೆ ಏಕಾಏಕಿ ಹಲ್ಲೆ ನಡೆಸಲಾಯಿತು. ಗೊಂದಲಕ್ಕೀಡಾದ ಪುಟ್ಟರಾಮುರವರು ವಿಷಯವೇನೆಂದು ಕೇಳುವ ಮೊದಲೇ ಅವರ ಮನೆಯ ಬಾಗಿಲನ್ನು ನೆರೆದಿದ್ದ ಗುಂಪು ಮುರಿದು ಹಾಕಿತು. 1-4-83 ರಂದು ಜಿಲ್ಲಾ ಪೋಲೀಸ್ ಅಧಿಕಾರಿಗಳಿಗೆ ಕಂಪ್ಲೆಂಟು ಕೊಟ್ಟು 16 ಮಂದಿ ಅಪರಾಧಿಗಳನ್ನು ಬಂಧಿಸಲು ಕೇಳಿದಾಗ ಅಧಿಕಾರಿಯ ತಾತ್ಸಾರವನ್ನು ಎದುರಿಸಬೇಕಾಯ್ತು. 2-4-83 ರ ನಂತರ ಸಂಪಾದಕರ ಜಮೀನಿನಲ್ಲಿ ಬೆಳೆಯನ್ನೆಲ್ಲ ಮೇಯಿಸುವುದು, ಕುಟುಂಬದವರ ಮೇಲೆ ಹಲ್ಲೆ ನಡೆಸುವುದು, ಸಣ್ಣ ಮಕ್ಕಳು ಶಾಲೆಗೆ ಗ್ರಾಮದೊಳಗೆ ಹೋಗುವಾಗ ಅಡ್ಡಗಟ್ಟಿ ಥಳಿಸುವುದು ಇತ್ಯಾದಿ ಅಮಾನವೀಯ ಕಿರುಕುಳಗಳು ಪ್ರಾರಂಭವಾದವು. ಊರಿನಲ್ಲಿ ಸಾಮಾಜಿಕ ಬಹಿಷ್ಕಾರವನ್ನು ಎದುರಿಸಬೇಕಾಯ್ತು. ದಿನಾಂಕ 6-4-83 ರ ಬೆಳಿಗ್ಗೆ ಗ್ರಾಮದ ಸವರ್ಣೀಯರೆಲ್ಲಾ ಸೇರಿ ತಮ್ಮ ತಿಪ್ಪೆ ಗೊಬ್ಬರಗಳನ್ನು ಗಾಡಿಯಲ್ಲಿ ತುಂಬಿಕೊಂಡು ಬಂದು ಪುಟ್ಟರಾಮುರವರಿಗೆ ಸರ್ಕಾರ ಮಂಜೂರು ಮಾಡಿದ್ದ 0.20 ಗುಂಟೆ ಖುಷ್ಕಿ ಜಮೀನಿಗೆ ಸುರಿದು ಗಲಾಟೆ ತಿಬ್ಬಿಸಿದ್ದಾರೆ. ಅಲ್ಲಿದ್ದ ನೀಲಗಿರಿ, ಸರ್ವೆ ಗಿಡಗಳನ್ನು ನಾಶ ಮಾಡಿದ್ದಾರೆ. ಈ ಎಲ್ಲ ರೀತಿಯ ಅತಿಕ್ರಮಗಳ ಬಗ್ಗೆ ಪೋಲೀಸರಿಗೆ ಹಲವು ಬಾರಿ ದೂರು ಕೊಟ್ಟರು ಅಪರಾಧಿಗಳ ವಿರುದ್ಧ ಕ್ರಮ ಕೈಗೊಳ್ಳಲಿಲ್ಲ. ಕ್ರಮ ಕೈಗೊಳ್ಳಬೇಕಾದ ರೂರಲ್ ಸಬ್ ಇನ್‌ಸ್ಪೆಕ್ಟರ್ ರಾಮಲಿಂಗು ಮಹಾಜಾತಿವಾದಿಯಾಗಿದ್ದು ಪುಟ್ಟರಾಮುರವರ ದೂರುಗಳಿಗೆ ಬೆಲೆಯಿಲ್ಲವಾಯಿತು. ಕಾವಲು ಕಾಯಲು ಬಂದ ಪೋಲೀಸ್ ಪೇದೆಗಳು ಬೇರೆಯವರ ಮನೆಯಲ್ಲಿ ಮಲಗಿಕೊಂಡು ಅಪರಾಧಿಗಳು ಎದುರಿಗಿದ್ದರೂ ಬಂಧಿಸದೆ ನಿಷ್ಕ್ರಿಯರಂತೆ ವರ್ತಿಸಿದ್ದರಿಂದ ಪುನಃ ಪುಟ್ಟರಾಮು ಮೇಲಿನ ಪೋಲೀಸ್ ಅಧಿಕಾರಿಗಳಿಗೆ ಪೋಲೀಸರು ಕೊಡುತ್ತಿರುವ 'ರಕ್ಷಣೆ' ಯ ಬಗ್ಗೆ ವಿವರಿಸಿದರು. ಇದರಿಂದ ಕೂಡ ಪ್ರಯೋಜನವಾಗಲಿಲ್ಲ. ಪೋಲೀಸು ಇಲಾಖೆ ನಿರ್ಲಕ್ಷ್ಯವನ್ನೇ ಮುಂದುವರೆಸಿತು. ಇದರ ಪರಿಣಾಮ 20-4-83 ರ ರಾತ್ರಿಯ ಘಟನೆ.

ಮುಬ್ಬು ಬೆಳದಿಂಗಳಿನಲ್ಲಿ ಮನೆಯ ಮುಂಭಾಗ

# ಹಸಿರು ಟವಲಿನ ಒಳಗೆ ಚಾಕುಚೂರಿ

''ದಾರಿದೀಪ'' ಪತ್ರಿಕೆಯ ಸಂಪಾದಕ ಪುಟ್ಟರಾಮುವಿನ ಮೇಲೆ ಹಲ್ಲೆ ನಡೆದ ಸುದ್ದಿ ತಿಳಿದ ತಕ್ಷಣ ಪುಟ್ಟರಾಮುರವರನ್ನು ನೋಡಿ ಬರೋಣವೆಂದು ಆಸ್ಪತ್ರೆಯ ಕಡೆ ಹೆಜ್ಜೆ ಹಾಕಿದೆ. 4ನೇ ವಾರ್ಡಿನ 10 ನೇ ಬೆಡ್‌ನಲ್ಲಿ ಅಂಗಾತಬಿದ್ದುಕೊಂಡಿದ್ದ ಪುಟ್ಟರಾಮುರವರನ್ನು ನೋಡಿದಾಗ ಕರಳು ಬಾಯಿಗೆ ಬಂದಂತಾಯ್ತು. ಸೈಕಲ್ ಚೈನಿನ ಏಟಿನಿಂದಾಗಿ ಮೈಯೆಲ್ಲಾ ಛಿದ್ರಛಿದ್ರವಾಗಿ ಹೋಗಿತ್ತು. ಮುಂಗೈ ಮುಂಗೈ ಮತ್ತು ಕಾಲಿಗೆ ಬ್ಯಾಂಡೇಜ್ ಕಟ್ಟಿದ್ದರು. ಸೋತು ದಣಿದ ಅವರ ಮುಖ, ನಿಸ್ತೇಜ ಕಣ್ಣುಗಳು ಅವರು ಎಷ್ಟು ನೋವನ್ನು ಅನುಭವಿಸುತ್ತಿದ್ದಾರೆಂಬುದನ್ನು ಸಾರಿಹೇಳುತ್ತಿದ್ದವು. ಮೇಲೆದ್ದು ಕುಳಿತುಕೊಳ್ಳಲೂ ತ್ರಾಣವಿಲ್ಲದೆ ಬಿದ್ದಿದ್ದ ಅವರನ್ನು ನಾನು ಅವರೂರಿನ ಇನ್ನೊಬ್ಬ ವ್ಯಕ್ತಿಯ ಸಹಾಯದಿಂದ ಮೇಲೆತ್ತಿ ಕುಳ್ಳಿರಿಸಿ . ಬೆನ್ನಿಗೆ ಒಂದೆರಡು ತಲೆದಿಂಬು ಕೊಟ್ಟು ಹಾಗೇ ಒರಗಿಸಿಕುಳ್ಳಿರಿಸಿದೆ. ನಂತರ ನಿಧಾನವಾಗಿ ಬಾಯಿತೆರೆದು ನನ್ನೊಡನೆ ಮಾತಾನಾಡಲು ಶುರುಮಾಡಿದರು. ನಡೆದಘಟನೆ ವಿವರಿಸಿದ ನಂತರ ಬಹಳ ಸುಸ್ತಾದವರಂತೆ ಕಾಣುತ್ತಿದ್ದರು. ನಾನು ಅವರ ಮುಖವನ್ನೇ ದಿಟ್ಟಿಸಿ ನೋಡುತ್ತಿದ್ದೆ. ಇದ್ದಕ್ಕಿದ್ದಂತೆ ನಿಸ್ತೇಜವಾಗಿದ್ದ ಅವರ ಮುಖ ಗಂಟಿಕ್ಕಿಕೊಳ್ಳತೊಡಗಿತು, ಹುಬ್ಬು ಮೇಲೇರಿತು, ನೋವಿನಿಂದಾಗಿ ನಿದ್ರೆಇಲ್ಲದೆ ಮೊದಲೇ ಕೆಂಪಗಾಗಿದ್ದ ಕಣ್ಣುಗಳು ಮತ್ತಷ್ಟು ಕೆಂಪಗಾಗಿ ಕೆಂಡದುಂಡೆಗಳಂತೆ ಕಾಣತೊಡಗಿದವು. ಅವರು ನನ್ನತ್ತ ತಿರುಗಿ ''ಇನ್ನೂ ನಾವು ಸುಮ್ಮನಿರಬಾರದು, ಏಟಿಗೆ ಏಟು, ರಕ್ತಕ್ಕೆ ರಕ್ತ'', ''ನನ್ನನ್ನು ಸಾಯೊಹಾಗೆ ಹೊಡೆದ ಅವರು ಪೋಲೀಸ್‌ನವರು ಏನ್ ಮಾಡಿಕೊಳ್ತಾರೆ ನಾವು ರೈತಸಂಘದವರು ಅಂತ ''ಹಸಿರು ಟವಲ್'' ನ್ನು ಸುತ್ತಿಕೊಂಡು ತಿರುಗುತ್ತಿದ್ದಾರಂತೆ, ಏನಾದರಾಗಲಿ ಇನ್ನು ಮುಂದೆ ನಾವೂ ಕೂಡ ''ಕೆಂಪು ಟವಲ್'' ನ್ನು ಹಾಕಿಕೊಂಡೇ ಬಿಡಬೇಕು'' ಎಂದು ಆವೇಶ ಬಂದವರಂತೆ ಮಾತನಾಡಿದರು. ಆಗಿನ ಅವರ ರುದ್ರರೂಪ ನೋಡುತ್ತಾ ನೋಡುತ್ತಾ ನನ್ನ ಮೈಮನಸ್ಸಿನ ತುಂಬವೂ ಗಾಯಗಳಾದಂತೆ ಅನ್ನಿಸಿತು ನನಗೆ. ಅವರನ್ನು ಶಾಂತಗೊಳಿಸಿ ಮತ್ತೆ ಬರುತ್ತೇನೆಂದು ಹೇಳಿ ಅವರು ಹೇಳಿದ ಕೆಂಪು ಟವಲ್‌ನ ಬಗ್ಗೆಯೇ ಯೋಚಿಸುತ್ತಾ ನಾನು ಆಸ್ಪತ್ರೆಯಿಂದ ಹೊರಗೆ ಬಂದೆ.

ಶಾಂತಿ ಮತ್ತು ಜಾತ್ಯಾತೀತತೆಯನ್ನು ಬಿತ್ತಬೇಕಾದ ರೈತ ಸಂಘದ ಹಸಿರು ಟವಲಿನ ಒಳಗೂ ಈ ಚಾಕು ಚೂರಿ ದಬ್ಬಾಳಿಕೆಗಳು ಬಂದು ಕೂರುತ್ತಾವಲ್ಲ ಹೇಗೆ? ಎಂದು ಚಿಂತಿಸುತ್ತಿದ್ದಂತೆ ಭಯ ನನ್ನನ್ನು ನಡುಗಿಸಿತು.

—ಕೆ. ಎನ್. ಗುರುಪ್ರಸಾದ್ ಕೆರಗೋಡು

# ಹಲ್ಲೆಯ ಹಿಂದಿರುವ ದರಖಾಸ್ತು ಭೂ ವಿವಾದ

ಮಂಡ್ಯ ತಾಲ್ಲೂಕು ಕೊತ್ತತ್ತಿ ಹೋಬಳಿ ಚೆನ್ನಪ್ಪನ ದೊಡ್ಡಿ ಗ್ರಾಮದ 20 ದಲಿತರಿಗೆ ಗುತ್ತಲು ಸ. ನಂ. 54 ರಲ್ಲಿ ಸುಮಾರು 22 ಎಕರೆಯಷ್ಟು ಜಮೀನನ್ನು ಇಪ್ಪತ್ತು ವರ್ಷಗಳ ಹಿಂದೆ ಸರ್ಕಾರ ಮಂಜೂರು ಮಾಡಿತ್ತು. ಮಂಜೂರಾದ ಜಮೀನು ಮರಕಾಡು ದೊಡ್ಡಿ ಗ್ರಾಮದ ಅಂಚಿನಲ್ಲಿದ್ದುದರಿಂದ ಅಲ್ಲಿಯ ಭೂಮಾಲೀಕರಾದ ನಾಥೇಗೌಡ ಮತ್ತು ಯಜಮಾನ್ ಮೊಳ್ಳಯ್ಯ ಮುಂತಾದವರು ದಲಿತರು ಉಳುತ್ತಿದ್ದ ಜಮೀನಿಗೆ ಅಕ್ರಮವಾಗಿ ಪ್ರವೇಶಿಸಿ ದಲಿತರನ್ನು ಅಲ್ಲಿಂದ ಓಡಿಸಿ ಬಗರ್‌ಹುಕುಂ ಸಾಗುವಳಿ ಮಾಡತೊಡಗಿದರು. ಮಂಜೂರಾದ ಜಮೀನಿಗೆ ಕಿಮ್ಮತ್ತು ಕಟ್ಟಿರುವುದಾಗಿಯೂ, ತಮ್ಮಲ್ಲಿ ಸಾಗುವಳಿ ಪತ್ರಗಳಿವೆಯೆಂದು ಹೇಳಿದರೂ ಕೇಳದೆ ದಲಿತರ ಮೇಲೆ ಹಲ್ಲೆ ಮಾಡಿ ಜಮೀನಿನತ್ತ ಸುಳಿಯದಂತೆ ನೋಡಿಕೊಂಡರು. ಪ್ರಾಣಭಯದಿಂದ ದಲಿತರು ತಮ್ಮಿಂದ ಕಿತ್ತುಕೊಂಡ ಜಮೀನನ್ನು ಬಿಡಿಸಿಕೊಳ್ಳಲಾಗದೆ ಸರ್ಕಾರದ ಮೊರೆ ಹೋದರು. ಈ ಘಟನೆ ಸಂಭವಿಸಿ ಇಪ್ಪತ್ತು ವರ್ಷಗಳಾಗಿವೆ. ದಲಿತರಿಗೇನೂ ನ್ಯಾಯ ಸಿಕ್ಕಿಲ್ಲ.

ಎಷ್ಟೋ ತಹಸೀಲ್ದಾರ್‌ಗಳು, ರೆವಿನ್ಯೂ ಇನ್‌ಸ್ಪೆಕ್ಟರ್‌ಗಳು ಬಂದು ಹೋದರು. ಜಮೀನಿನ ಬಗ್ಗೆ ಏನಾದರು ಗ್ರಮ ಕೈಗೊಳ್ಳುವ ಯತ್ನಗಳು ನಡೆದರೆ ಜಮೀನನ್ನು ಕಿತ್ತುಕೊಂಡ ಭೂಮಾಲೀಕರೆಲ್ಲ ಒಟ್ಟು ಸೇರಿ ಅಧಿಕಾರಿಗಳಿಗೆ ಹಣ ಇತ್ಯಾದಿಯೊಡನೆ 'ಚೌರಿ' ಬೀಸಲಾರಂಭಿಸತೊಭಿಸತೊಡಗಿದಂತೆ ಫೈಲುಗಳು ಅಲ್ಲಲ್ಲೆ ಕೂತವು. ಚನ್ನಬಸವಯ್ಯನವರು ತಹಸೀಲ್ದಾರರಾಗಿದ್ದಾಗ ಭೂಮಾಲೀಕರು ಜಮೀನಿಗೆ ಆರ್. ಟಿ. ಸಿ. ಪಡೆಯಲು ವಿಫಲ ಯತ್ನ ನಡೆಸಿದರು. ಆದರೆ ಕೆಂಪಶೆಟ್ಟರು ತಹಸೀಲ್ದಾರ್ ಆಗಿದ್ದಾಗ ತಾವು ವರ್ಗವಾಗಿ ಹೋಗುವ ಕೊನೆಗಳಿಗೆಯಲ್ಲಿ ಆರ್. ಟಿ. ಸಿ. ಯನ್ನು ಕೊಡಲು ಅನುಮತಿಯಿತ್ತರೆಂಬ ಅಂಶ ಬೆಳಕಿಗೆ ಬಂದಿದೆ. ನಾಲ್ಕು ತಿಂಗಳ ಹಿಂದೆ ಜಿಲ್ಲಾಧಿಕಾರಿಯವರು ಈ ಬಗ್ಗೆ ವರದಿ ಕೊಡಲು ಸಂಬಂಧಿಸಿದ ಅಧಿಕಾರಿಗಳಿಗೆ ಆಜ್ಞೆಯಿತ್ತಾಗ ಅಲ್ಲಿ ಜಮೀನಿಲ್ಲವೆಂತಲೂ, ಮಂಜೂರಾಗಿಲ್ಲವೆಂತಲೂ ಸಬೂಬು ಹೇಳುತ್ತ ಕಾಲ ಕಳೆದಿದ್ದಾರೆ.

ಈ ನಡುವೆ ಮುಖ್ಯಮಂತ್ರಿ ರಾಮಕೃಷ್ಣ ಹೆಗ್ಗಡೆಯವರು ಬಗರ್ ಹುಕುಂ ಸಾಗುವಳಿ ಮಾಡುವ ರೈತರಿಗೆ ಅವರಂತೆಯೇ ಜಮೀನನ್ನು ಮಂಜೂರು ಮಾಡುವುದಾಗಿ ಹೇಳಿಕೆಯೊಂದನ್ನು ನೀಡಿದ್ದು, ಮೇಲಿನ ಭೂವಿವಾದಕ್ಕೆ ಹೊಸ ತಿರುವು ನೀಡಿದಂತಾಯಿತು. ಆಗ ಅಕ್ರಮವಾಗಿ ಭೂ ಒಡೆಯರಾಗಿದ್ದ ನಾಥೇಗೌಡ, ಮೊಳ್ಳಯ್ಯ ಮುಂತಾದವರಿಗೆ ಕೋರೆ ಹಲ್ಲುಗಳು ಮೂಡಿದವು. ಜಮೀನು ಮಂಜೂರಾತಿ ಪಡೆದಿದ್ದ ದಲಿತರನ್ನು ಹೆದರಿಸಿಕೊಂಡು ಭತ್ತ, ಕಬ್ಬು ಬೆಳೆದು ಹಣದ ಥೈಲಿಯೊಡನೆ ಕೊಬ್ಬಿ ಹೋಗಿದ್ದ ಈ ಭೂಮಾಲೀಕರಿಗೆ ಆಗಾಗ ಭೇದಿ ಹೊಡೆಸುತ್ತಿದ್ದ 'ದಾರಿದೀಪ' ಸಂಪಾದಕರಾದ ಪುಟ್ಟರಾಮುರವರ ಮೇಲೆ ಇವರ ಕ್ರೂರ ದೃಷ್ಟಿ ಹರಿಯಿತು. ಚೆನ್ನಪ್ಪದೊಡ್ಡಿಯ ದಲಿತರ ಬೆನ್ನ ಹಿಂದೆ ನಿಂತು ಅವರ ಭೂ ಸಮಸ್ಯೆಯ ಬಗ್ಗೆ ತಮ್ಮ ಪತ್ರಿಕೆಯಲ್ಲಿ ಬರೆದು ಅಧಿಕಾರಿಗಳು ಕಾರ್ಯರೂಪಕ್ಕಿಳಿಯುವಂತೆ ಪ್ರಯತ್ನಿಸಿ, ಮುಖ್ಯಮಂತ್ರಿಯವರಿಗೆ ಬಹಿರಂಗ ಪತ್ರವೊಂದನ್ನು ಬರೆದು ಬಗರ್‌ಹುಕುಂ ಮಾಡುವವರಿಗೇ ಜಮೀನನ್ನು ಮಂಜೂರು ಮಾಡಿದರೆ ದಲಿತರಿಗಾಗುವ ಅನ್ಯಾಯವನ್ನು ವಿವರಿಸಿದ್ದರು. ಇದೆಲ್ಲ ಭೂಮಾಲೀಕರಿಗೆ ಉದ್ದಟತನದ, ಪ್ರತಿಷ್ಠೆಯ ವಿಷಯವಾಗಿ ಪುಟ್ಟರಾಮುರವರ ಮೇಲೆ ಹಲ್ಲೆ ಮತ್ತು ಕೊಲೆ ಯತ್ನಗಳು ನಡೆದಿವೆ.

---

ತಮ್ಮ ಹೆಂಡತಿಯೊಂದಿಗೆ ಮಾತಾಡುತ್ತ ಕುಳಿತ ಪುಟ್ಟರಾಮುರವರ ಮೇಲೆ ನಾಥೇಗೌಡ ಮತ್ತು ಮೊಳ್ಳಯ್ಯ ಕರೆಸಿದ್ದ ಸಾತನೂರಿನ ಮತ್ತು ಅಕ್ಕಪಕ್ಕದ ಊರಿನ ಗೂಂಡಾಗಳು ಭೂಮಿಯಿಂದ ಉದ್ಭವವಾದಂತೆ ಹಠಾತ್ತನೆ ಸೈಕಲ್ ಚೈನು, ನೀಲಗಿರಿ ದೊಣ್ಣೆ, ತೆಂಗಿನ ಗೊದಮೊಟ್ಟೆ, ಸೌದೆ ಸೀಳು ಇತ್ಯಾದಿ ವಸ್ತುಗಳಿಂದ ತೀವ್ರ ಸ್ವರೂಪದ ಹಲ್ಲೆ ನಡೆಸಿದರು. ಗಂಡನ ರಕ್ಷಣೆಗೆ ಬಂದ ಹೆಂಡತಿಗೂ ಬಲವಾದ ಹೊಡೆತಗಳು ಬಿದ್ದವು. ಹಲ್ಲೆಯ ತೀವ್ರತೆ ಎಷ್ಟೆಂದರೆ ಪುಟ್ಟರಾಮು ಪ್ರಜ್ಞಾಶೂನ್ಯರಾದರು. ಪ್ರಜ್ಞಾಶೂನ್ಯರಾದ ಕೂಡಲೇ ಪುಟ್ಟರಾಮುರವರನ್ನು ನಾಥೇಗೌಡನ ಮನೆಯ ಮುಂಭಾಗಕ್ಕೆ ಹೊತ್ತುಕೊಂಡು ಬಂದು ಹೊರಗಡೆಯ ಬೀದಿ ದೀಪ ಹಾಕಿಕೊಂಡು ಅಲ್ಲಿಯೂ ಥಳಿಸಲಾಯಿತು. ಕೊನೆಗೆ ಅಲ್ಲೇ ಇದ್ದ ನಾಥೇಗೌಡನ ಹುಲ್ಲುಮೆದೆಯಿಂದ ಹುಲ್ಲು ಇರಿದು ಪುಟ್ಟರಾಮು ಮೇಲೆ ಹಾಕಿ ಬೆಂಕಿಯಿಡುವಪ್ರಯತ್ನ ನಡೆಯಿತು. ಆ ವೇಳೆಗೆ ಪುಟ್ಟರಾಮುರವರ ಮಕ್ಕಳು ಮರಕಾಡುದೊಡ್ಡಿಗೆ ಹೊಂದಿಕೊಂಡೆ ಇರುವ ಶ್ರೀನಿವಾಸಪುರಕ್ಕೆ ಓಡಿಬಂದು ತಮ್ಮ ತಂದೆಯನ್ನು ಕೊಲ್ಲುತ್ತಿದ್ದಾರೆಂದು ಕೂಗಿಕೊಂಡಾಗ ಚೆನ್ನಯ್ಯ, ಮುರುಳಿಕೃಷ್ಣ, ರಾಮು ಮುಂತಾದವರು ನಾಥೇಗೌಡರ ಮನೆಯ ಬಳಿಗೆ ಧಾವಿಸಿ ಪುಟ್ಟರಾಮುರವರನ್ನು ಬಿಡಿಸಿಕೊಳ್ಳಲು ಯತ್ನಿಸಿದಾಗ ಚೆನ್ನಯ್ಯನ ಮೇಲೂ ಹಲ್ಲೆ ಮಾಡುವುದಾಗಿ ಬೆದರಿಕೆ ಹಾಕಲಾಯಿತು. ಆದರೂ ಚೆನ್ನಯ್ಯ ಧೈರ್ಯಗೆಡದೆ ಪುಟ್ಟರಾಮುರವರನ್ನು ಪ್ರಾಣಾಪಾಯದಿಂದ ರಕ್ಷಿಸಿದರು.

**ಹುಲ್ಲುಕೆರೆ ಮಹದೇವ**

ಪುಟ್ಟರಾಮು ಈಗ ಮಂಡ್ಯದ ಜನರಲ್ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾರೆ. ಪೋಲೀಸರು ನಾಥೇಗೌಡ, ಮೊಳ್ಳಯ್ಯ, ಮೇಷ್ಟ್ರು ನಿಂಗಯ್ಯನ ಮಕ್ಕಳು, ಯಜಮಾನ್ ಮೊಳ್ಳಯ್ಯನಸಂಬಂಧಿಕರು ಇವರೆಲ್ಲ ಸೇರಿದಂತೆ ಒಟ್ಟು 13 ಮಂದಿಯನ್ನು ಬಂಧಿಸಿ ಜಾಮೀನಿನ ಮೇಲೆ ಬಿಡುಗಡೆ ಮಾಡಿದ್ದಾರೆ. ಮಂಡ್ಯದ ಶಾಸಕರಾದ ಬಿ. ದೊಡ್ಡಬೋರೇಗೌಡರು ಇವರಿಗೆ ಜಾಮೀನು ಕೊಟ್ಟು ಬಿಡಿಸಿಕೊಂಡಿದ್ದಾರೆ. ಒಂದು ಕಾಲಕ್ಕೆ ಹುರುಳಿ ಬೆಳೆಯಲೂ ಲಾಯಕ್ಕಿಲ್ಲದ ಮಂಡ್ಯದ ನೆಲ ಇಂದು ವಿಶ್ವೇಶ್ವರಯ್ಯನವರ ಶ್ರಮದಿಂದ ಸಮೃದ್ಧವಾಗಿ ಭತ್ತ, ಕಬ್ಬುಗಳನ್ನು ಬೆಳೆಯುತ್ತಿದೆ ನಿಜ. ಆದರ ಒಟ್ಟೊಟ್ಟಿಗೆ ದರ್ಪ, ದಬ್ಬಾಳಿಕೆ, ಕೊಲೆ–ಸುಲಿಗೆಗಳನ್ನು ಬತ್ತ, ಕಬ್ಬುಗಳಿಗಿಂತ ಯಥೇಚ್ಛವಾಗಿ ಬೆಳೆಯುತ್ತಿದೆ ಎಂಬುದಕ್ಕೆ ಪುಟ್ಟರಾಮುರವರ ಕೊಲೆ ಪ್ರಯತ್ನವೇ ಸಾಕ್ಷಿ. 31–3–83 ರಂದು ನಡೆಸಿದ ಹಲ್ಲೆಯ ಅಪರಾಧದಿಂದ ತಪ್ಪಿಸಿಕೊಳ್ಳಲು ಬೇರೆ ಊರಿನವರನ್ನು ಕರೆಸಿ 20–4–83 ರಂದು ಹಲ್ಲೆ ನಡೆಸಲಾಗಿದೆ. ಮುಖ್ಯವಾಗಿ 3–3–83 ರಂದು ರಾತ್ರಿ 12 ಗಂಟೆಯ ವೇಳೆಯಲ್ಲಿ ತಮ್ಮ ಮನೆಯ ಮುಂದಿದ್ದ ದಿಂಡುಗಲ್ಲುಗಳನ್ನು ಕದಿಯಲು ಬಂದಿದ್ದ ನಾಥೇಗೌಡನ ಮನೆಯ ಜೀತದಾಳು ಮತ್ತು ಸಾತನೂರಿನ ಇನ್ನೊಬ್ಬ ಜೀತದಾಳು ಈ ಇಬ್ಬರು ಹುಡುಗರನ್ನು ಪುಟ್ಟರಾಮು ಗದರಿಸಿಕಳುಸಿದ್ದ ವಿಷಯವನ್ನು ಚಪ್ಪಲಿಯಲ್ಲಿ ಹೊಡೆದರೆಂದು ಸುಳ್ಳು ಸುದ್ದಿ ಹಬ್ಬಿಸಿ, ಎಲ್ಲ ಅಪರಾಧಗಳಿಂದ ನಿರುಮ್ಮಳವಾಗಿ ಬದುಕಬೇಕೆಂದು ನಾಥೇಗೌಡ, ಮೊಳ್ಳಯ್ಯ ಮುಂತಾದವರು ನೋಡುತ್ತಿದ್ದಾರೆ ಇದು ಸಾಧ್ಯವಾಗುತ್ತದೆಯೆ ? ಪುಟ್ಟರಾಮು ಈಗ ಗಾಯಗೊಂಡ ಹುಲಿ !

# ನನ್ನ ನೋವಿನ ಸಂಪುಟದಿಂದ....

**ನಾನು ಹುಟ್ಟಿದಾಗ, ನಾನು ಹುಟ್ಟಿದ್ದಕ್ಕೆ ಯಾವ ದಿಕ್ಕಿನಲ್ಲೂ ಯಾವ ನಕ್ಷತ್ರವೂ ಝಗಮಗಿಸಲಿಲ್ಲ; ಸೂರ್ಯನ ಬಿಂಬ ಹಣ್ಣಿನೋಪಾದಿಯಲ್ಲಿ ಕಾಣಿಸಲಿಲ್ಲ. ನೆಲದ ಮೇಲೆ ಕಾಲಿಟ್ಟುಕೊಂಡೆ ನಾನುನಡೆಯತೊಡಗಿದೆ; ನನಗೆ ಬುದ್ಧಿ ಬಂದ ನಂತರ ಯಥಾರ್ಥಗಳ ಧಗಧಗಿಸುವ ಕೆಂಡಗಳ ಮೇಲೆ ನಾನು ನಡೆದುಬಂದಿದ್ದೇನೆ.**

(ಕಳೆದ ಸಂಚಿಕೆಯಿಂದ)

ತನ್ನ ಬಗ್ಗೆ ತನಗೇ ನಾಚಿಕೆಯಾಗುವಂಥ ಒಂದಲ್ಲ ಒಂದು ಕೆಲಸವನ್ನೂ ನನ್ನ ತಂದೆ ಮಾಡುತ್ತಿರುತ್ತಿದ್ದರು. ಕೈಗೆಬರುವ ಇಷ್ಟು ಕಡಿಮೆ ಪಗಾರಿಗೆ ಅದೆಷ್ಟು ಜಟಗಳು. ಈಚಟಗಳನ್ನು ಪೋಷಿಸಿಕೊಂಡು ಬರಲು ಅವರು ಉಗ್ರಾಣದಿಂದ ಹಿತ್ತಾಳೆ-ತಾಮ್ರವನ್ನು ಕದಿಯುತ್ತಿದ್ದರು. ಗೇಟ್‌ನಲ್ಲಿ ತಪಾಸಣೆ ನೆಡೆಸಿದಾಗ ಕದ್ದಮಾಲು ಸಿಗದಿರಲೆಂದು ಅವರು ಅದನ್ನು ಲಂಗೋಟಿಯಲ್ಲಿಟ್ಟುಕೊಳ್ಳುತ್ತಿದ್ದರು. ನನಗಂತೂ ಅವರ ಈ ಆಟಗಳು ಒಂದಿಷ್ಟು ಇಷ್ಟವಾಗುತ್ತಿರಲಿಲ್ಲವಾದರೂ ಇದನ್ನು ಹೇಳುವಂಥ ಧೈರ್ಯವಿರಲಿಲ್ಲ. ಕದ್ದಮಾಲನ್ನು ಮಾರಲು ಅವರು ನನ್ನನ್ನೇ ಕಳ್ಳಪೇಟೆಗೆ ಕಳಿಸುತ್ತಿದ್ದರು. ಅವರ ಕಳ್ಳತನಕ್ಕೂ ಒಂದು ವಿಧಿ ವಿಧಾನವಿತ್ತು, ಅವರು ಹೆಚ್ಚು ಮಾಲನ್ನು ಎಂದೂ ಕದ್ದು ತರುತ್ತಲಿರಲಿಲ್ಲ. ಹಣವನ್ನುಗಂಟು ಮಾಡಿಟ್ಟುಕೊಳ್ಳುವುದು ಅವರ ಉದ್ದೇಶವಾಗಿರಲಿಲ್ಲ. ಬರಿ ಮೈಲಿ ಬಂದಿದ್ದೇನೆ, ಬರಿ ಮೈಲಿ ಹೋಗುತ್ತೇನೆ–ಇದು ಅವರ ಜೀವನ ದರ್ಶನವಾಗಿತ್ತು, ಅವರಿಗೊಬ್ಬ ಯಹೂದಿ ಮಿತ್ರನಿದ್ದ. ಅವನು ಕ್ಲಬ್‌ಗೆ ಆಡಲು ಬರುತ್ತಿದ್ದರು.

ಆತ ವಜ್ರಗಳ ವ್ಯಾಪಾರ ಮಾಡುತ್ತಿದ್ದ. ಒಮ್ಮೆ ಈ ವ್ಯಾಪಾರಿ ಪ್ಯಾಲೆಸ್ಟೈನ್‌ಗೆ ಹೋಗಬೇಕಾಯಿತು. ಆಗ ಆತ ತನ್ನ ವಜ್ರಗಳು ತುಂಬಿದ ಪೆಟ್ಟಿಗೆಯನ್ನು ನನ್ನ ತಂದೆಯ ಬಳಿ ಇಟ್ಟು ಹೋಗುತ್ತಾನೆ. ಹೀಗೆ ಹೋದವನು ಒಂದೆರಡು ವರ್ಷಗಳವರೆಗೆ ವಾಪಸ್ ಬರುವುದಿಲ್ಲ. ಆದರೂ ಆ ವಜ್ರಗಳನ್ನು ಮಾರಿಬಿಡಬೇಕೆಂಬ ಮೋಹ ತಂದೆಯ ಮನಸ್ಸಿಗೆಂದೂ ಬರುವುದೇ ಇಲ್ಲ. ಆ ವ್ಯಾಪಾರಿ ವಾಪಸ್ ಬಂದಾಗ ಅವನ ಮಾಲನ್ನು ಸುರಕ್ಷಿತವಾಗಿ ಹಿಂತಿರುಗಿಸುತ್ತಾರೆ.

ನಂತರ ಅವರ ಕೆಟ್ಟ ಅಭ್ಯಾಸಗಳು ಮತ್ತೂ ಮುಂದುವರಿಯುತ್ತ ಹೋದುವು. ಬಂದ ಸಂಬಳವೆಲ್ಲ ಸಾಲ ತೀರಿಸುವುದಕ್ಕೆ ಖರ್ಚಾಗುತ್ತಿತ್ತು. ಕೊನೆಗೆ ಬೇಸರಗೊಂಡು ಅವರು ನೌಕರಿ ಬಿಟ್ಟುಬಿಟ್ಟರು. ಕೊನೆಯಲ್ಲಿ ಸಿಕ್ಕಿದ ಹಣವನ್ನು ಸರ್ವೀಸ್‌ನಲ್ಲಿದ್ದಾಗ ಮಾಡಿದ ಸಾಲವನ್ನು ತೀರಿಸಲು ಖರ್ಚು ಮಾಡಿದರು. ಹೀಗೆ ನಾವು ಬರಿಗೈದಾಸಯ್ಯಗಳಾಗಿ ನಮ್ಮ ಊರಿಗೆ ವಾಪಸು ಬಂದೆವು. ಮುಂಬಯಿಯ ಎರಡು ದಿನಗಳ ಥಳಕಿನ ಜೀವನ ತನ್ನ ಬೆಡಗನ್ನು ಕಳೆದುಕೊಂಡಿತ್ತು. ಆಗ, ಅಪ್ಪ–ಅಮ್ಮ ಇಬ್ಬರು ಕೂಲಿ ಮಾಡಲು ಹೋಗುತ್ತಾರೆ. ಆಳವಾದ ಬತ್ತಿದ ಬಾವಿಯಲ್ಲಿ ಇಳಿದು ಅಪ್ಪ ಕೊಡಲಿಯಿಂದ ಬೇರುಗಳನ್ನು ಕಡಿಯುತ್ತಿದ್ದ ಆ ದೃಶ್ಯ ಇಂದಿನ ದೃಶ್ಯದಂತೆ ನನ್ನ ಕಣ್ಣಿಗೆ ಕಟ್ಟಿದೆ. ಹಳ್ಳಿಯಲ್ಲಿ ಈಗ ಅವರು ಮನೆಯಲ್ಲೇ ಮದ್ಯದ ತಯಾರಿಕೆಯಲ್ಲಿ ತೊಡಗುತ್ತಾರೆ. ಆದರೆ ಮಾರುವ ಲೋಭಕ್ಕೆ ಬೀಳುವುದಿಲ್ಲ. ಸ್ನೇಹಿತರನ್ನು ಕರೆದು-ಕರೆದು ತುಂಬಾ ಒತ್ತಾಯ ಮಾಡಿ ಕುಡಿಯಲು ಕೊಡುತ್ತಾರೆ. ಮದ್ಯ ತಯಾರಿಸಿದ ಮೊದಲ ದಿನ ನಳಿಕೆಯಿಂದ ಅದು ಹೊರ ಬಂದಾಗ ಬೆಂಕಿಕಡ್ಡಿ ಗೀರಿ ಹೊತ್ತಿಸುತ್ತಾರೆ. 'ಭಕ್' ಎಂದು ಬೆಂಕಿ ಬರುತ್ತಲೇ ಅವರು ಸಂತೋಷದಿಂದ ಹಿಗ್ಗುತ್ತಾರೆ.....ತಂದೆ ಸತ್ತಾಗ ನನ್ನ ಪಾಲಿಗೆ ಬಂದ ತಗಡಿನ ಡಬ್ಬಗಳನ್ನು, ಮರದ ಹಲಗೆಗಳನ್ನು, ಖಾಲಿ ಬಾಟಲುಗಳನ್ನು.....ಇನ್ನು ಅವರ ಇತರೆ ಸಾಮಾನುಗಳನ್ನು ನಾನು ಒಡೆದು ಚೂರು ಚೂರು ಮಾಡುತ್ತೇನೆ.



ದಯಾ ಪವಾರ್

ಅನುವಾದ : ತಿಪ್ಪೆಸ್ವಾಮಿ

ನಮ್ಮ ಊರಿನಲ್ಲಿ ಮದುವೆ ಸುಗ್ಗಿ ಬಂತೆಂದರೆ ನಮ್ಮ ಮನೆಗಳಲ್ಲಿ ದಸರೆ-ದೀಪಾವಳಿಯ ಸಡಗರ ನನ್ನ ತಂದೆಯುವರ ಜೊತೆ ಬ್ಯಾಂಡ್ ಬಾರಿಸುವವರ ತಂಡವೊಂದಿತ್ತು. ಆ ತಂಡದಲ್ಲಿ ನನ್ನ ತಂದೆ ಓಲಗ ಊದುತ್ತಿದ್ದರು. ಮನೆಯಲ್ಲಿ ಸಡಗರದ ವಾತಾವರಣವಿರುತ್ತಿತ್ತು. ಮದುವೆ ಮನೆಗಳಲ್ಲಿ ಉಳಿದದ್ದು-ಮಿಕ್ಕದ್ದು ಮನೆಗೆ ಬರುತ್ತಿತ್ತು. ಮಜೂರಿಯಾಗಿ ಅವರು ಕೊಟ್ಟ ಹಣದಿಂದ ನಮ್ಮ ಮೈಮೇಲೆ ಬಟ್ಟೆಗಳು ಕಂಗೊಳಿಸುತ್ತಿದ್ದುವು. ಬ್ಯಾಂಡ್ ಬಾರಿಸುವವರ ಬದುಕಿನಲ್ಲಿ ಹೆಜ್ಜೆ ಹೆಜ್ಜೆಗೂ ಅಪಮಾನ. ಕಚಡಾ ಎಸೆಯುವ ಸ್ಥಳದಲ್ಲಿ ಇವರು ಊಟ ಮಾಡಲು ಎಲೆ ಹಾಕುತ್ತಿದ್ದರು.

ನಗರಗಳಲ್ಲಿನ ಜಾತಿ-ವ್ಯವಸ್ಥೆಯ ಭೀಕರ ರೂಪವನ್ನು ಅನುಭವಿಸುವಂಥ ಅವಕಾಶ ನಮಗೆ ಬರದಿದ್ದರೂ ಹಳ್ಳಿಗಳಲ್ಲಿ ಹೆಜ್ಜೆ – ಹೆಜ್ಜೆಗೂ ಅದರ ಸಾಕ್ಷಾತ್ಕಾರವಾಗುತ್ತಿತ್ತು. ಹರಿವ ನದಿಯ ನೀರನ್ನು ಕುಡಿಯುವ ಅವಕಾಶವೂ ನಮಗಿರಲಿಲ್ಲ. ಕೇಪರ್‌ಗಾಂವ್, ಶ್ರೀರಾಮ್‌ಪುರ್‌ಗಳಲ್ಲಿನ ಸಕ್ಕರೆ ಉತ್ಪಾದಕರ ಕಬ್ಬಿನ ತೋಟಗಳನ್ನು ತಂಪಾಗಿ–ಹಸಿರಾಗಿಟ್ಟಿರಲು, ದ್ರಾಕ್ಷಿ ತೋಟಗಳನ್ನು ಲಕ–ಲಕ ನಗಿಸುವಂತಿಟ್ಟಿರಲು ನದಿಯ ನೀರಿನ ಉಪಯೋಗವಾಗುತ್ತಿತ್ತು. ಹೀಗಾಗಿ ಇಂದೂ ಕೂಡ ಹಳ್ಳಿ ಪ್ರದೇಶಗಳು ನೀರಿಗಾಗಿ ಬಾಯಿಬಿಡುತ್ತಲೇ ಇವೆ, ಒಣಗಿ ಬರಡಾಗಿವೆ. ಆದಿವಾಸಿಗಳ ಈ ಇಡೀ ಪ್ರದೇಶ ಏರಿಳಿತಗಳ–ಕಲ್ಲುಗುಡ್ಡಗಳ ಬೀಡಾಗಿದೆ. ನಮ್ಮ ಊರಿನ ಪಕ್ಕದಲ್ಲೇ ಅಮೃತವಾಹಿನಿ ನದಿ ಇದ್ದು, ಊರು ಬೆಟ್ಟದ ತಪ್ಪಲಲ್ಲಿದೆ. ಇಂಥ ಪ್ರಕೃತಿಯ ಸಾನಿಧ್ಯದಲ್ಲಿಊರ ಹೊರ ಭಾಗದ ಮಹಾರ್‌ವಾಡಿಯಲ್ಲಿ ನಾನು ಹುಟ್ಟಿದೆ. ಮನುಷ್ಯರ ಕಾಂಜಿಹೌಸ್ ರೂಪಿಸುವ ಈ ಮಹಾರ್‌ವಾಡದ ಸ್ಥಿತಿ ಹೇಗೆಂದರೆ ಕೆಂಸ್ಟ್ರಕ್ಷನ್ ಷಡ್ಡ್‌ಗಳಂತೆ.

ನಾನು ಹುಟ್ಟಿದಾಗ, ನಾನು ಹುಟ್ಟಿದ್ದಕ್ಕೆ ಯಾವ ದಿಕ್ಕಿನಲ್ಲೂ ಯಾವ ನಕ್ಷತ್ರವೂ ಝಗಮಗಿ

ಸಲಿಲ್ಲ; ಸೂರ್ಯನ ಬಿಂಬ ಹಣ್ಣಿನೋಪಾದಿಯಲ್ಲಿ ಕಾಣಿಸಲಿಲ್ಲ. ನೆಲದ ಮೇಲೆ ಕಾಲಿಟ್ಟುಕೊಂಡೆ ನಾನು ನಡೆಯತೊಡಗಿದೆ; ನನಗೆ ಬುದ್ಧಿ ಬಂದ ನಂತರ ಯಥಾರ್ಥಗಳ, ಧಗಿಧಗಿಸುವ ಕೆಂಡಗಳ ಮೇಲೆ ನಾನು ನಡೆದುಬಂದಿದ್ದೇನೆ. ನಾಲ್ಕೂ ಕಡೆ ಹಬ್ಬಿರುವ ಪ್ರಕೃತಿಯ ಸಮೃದ್ಧರೂಪ ನನ್ನನ್ನು ಮುಳ್ಳಿನೋಪಾದಿಯಲ್ಲಿ ಚುಚ್ಚತೊಡಗುತ್ತಿತ್ತು. ಪ್ರಕೃತಿಯನ್ನು ಕುರಿತಂತೆ ಒಂದು ಕವಿತೆಯನ್ನೂ ನನ್ನಿಂದ ಬರೆಯಲಾಗದಿದ್ದುದಕ್ಕೂ ಬಹುಶಃ ಇದೇ ನಿಶ್ಚಿತ ಕಾರಣವಿದ್ದರೂ ಇರಬಹುದು. ಮರಾಠಿ ಕವಿಗಳು ಚಿತ್ರಿಸಿರುವ ಪ್ರಕೃತಿ ಸೌಂದರ್ಯಕ್ಕೆ ಸಂಬಂದಿಸಿದಂಥ ಕವಿತೆಗಳು ನನ್ನ ಮನಸ್ಸನ್ನು ಎಂದೂ ತಮ್ಮೆಡೆಗೆ ಆಕರ್ಷಿಸಿಕೊಳ್ಳಲಿಲ್ಲ. ಈ ದೇಶದಲ್ಲಿ ವರ್ಣಗಳಿರುವಂತೆ ಜಾತಿಗಳೂ ಇವೆ, ಶ್ರಮದ ವಿಭಜನೆಯಷ್ಟೇ ಅಲ್ಲ ಶ್ರಮಿಕರ ವರ್ಗ ಭೇದಗಳೂ ಇವೆ. ಒಂದು ಜಾತಿ ಇನ್ನೊಂದು ಜಾತಿಯ ಮುಖದ ಮುಂದೆ ನಿಂತು ಪೈಪೋಟಿ ನಡೆಸುತ್ತಿದೆ. ಈ ಕಾರಣದಿಂದಾಗಿಯೇ ಉಸಿರು ಕಟ್ಟಿಸುವಂಥ ವ್ಯವಸ್ಥೆ ಇಂದು ಉಂಟಾಗಿರುವುದು. ಇನ್ನು, ನಾನು ಎಲ್ಲರಿಗಿಂತ ಕೆಳಗಿನವ. ಅದರಲ್ಲೂ ರಂಡೆತಾಯಿಯ ದಿಕ್ಕೆಟ್ಟ ಮಗ! ಹರಿವ ನೀರಿನ ಪ್ರವಾಹದಿಂದ ತಪ್ಪಿಸಿಕೊಂಡು ದಡ ಸೇರಿದ ಕಚಡಾ–ಬದುಕು ನನ್ನದು.

'ರಾಂಡ್ ಕೆ ಪೊಟ್ಟೆ ಕೋ ಭಲ್‌ತೀಚ್ ಭರ್ ತೀಚ್ ಲಿಕ್ಕರ್ ರೈತಿ' (ರಂಡೆ ಮಗನಿಗೆ ಅದೆಷ್ಟು ಬುದ್ದಿ ಇದೆ!) ಇದು ನಾಲ್ಕೂಕಡೆಗಳಿಂದ ನನ್ನ ಬಗೆಗೆ ಕೇಳಿ ಬರುತ್ತಿದ್ದ ಮಾತು. ಉದ್ಗಾರ! 'ಬ್ರಾಹ್ಮಣ'ರ ಹಾಗೆ ಏನು ಓದುತ್ತಾನೆ-ಅವನು! ದನ–ಕುರಿ ಕಾಯ್ದುಕೊಂಡು ಹಾಗೆ ಬಿದ್ದಿರ್ತಾನೆ– ಕುಚೇಷ್ಟೆಯಿಂದ ತುಂಬಿದ ಜನರ ಈ ಬಗೆಯ ಮಾತುಗಳನ್ನು ತುಂಬ ಗೌರವಭಾವದಿಂದ ನನ್ನ ಹೃದಯ ಸಂಪುಟದಲ್ಲಿ ಕಾಪಾಡಿಕೊಂಡು ಬಂದೆ ನಾನು. ತಂದೆ ಸತ್ತಾಗ ನನಗೆ ವಾಸ್ತವತೆಯ ಪರಿಚಯವಾಯಿತು. ಅಮ್ಮಳಂತೂ ಹಳ್ಳಿಬದುಕಿನೊಂದಿಗೆ ತಾದಾತ್ಮಗೊಂಡವಳು....ಸತ್ತ ಪ್ರಾಣಿಗಳ ಚರ್ಮ ಸುಲಿಯುವುದು; ಅದನ್ನು ಹಳ್ಳಿಯಿಂದ ಪಟ್ಟಣಕ್ಕೆ ಸಾಗಿಸುವುದು, ಹಳ್ಳಿಯಲ್ಲಿ ಯಾವನಾದರೂ ಸವರ್ಣೀಯ ಸತ್ತರೆ ಸತ್ತ ಸುದ್ದಿಯನ್ನು ಸುತ್ತಲ ಹಳ್ಳಿಗಳಿಗೆ ಬಿತ್ತುವುದು – ಇವು

## ಅನುಭವದ ಗಣಿಯಿಂದ

ನನ್ನ ಅಮ್ಮ ಮಾಡುತ್ತಿದ್ದ ಕೆಲಸಗಳು. ಇಷ್ಟೆಲ್ಲ ಕೆಲಸಕ್ಕೆ ಅವಳಿಗೆ ಸಿಗುತ್ತಿದ್ದುದು ವರ್ಷಕ್ಕೊಂದು ಸಾರಿ ಒಂದು ಸೇರು–ಎರಡು ಸೇರು ಧಾನ್ಯ. ಹಟ್ಟಿಯ ತಂಗಳು ಅನ್ನ. ಆಷಾಢ-ಶ್ರಾವಣ ಮಾಸಗಳ ಮಳೆಗಾಲದಲ್ಲಿ ಮಳೆ ಜುಳು ಜುಳು ಮನೆಯೊಳಗೆಲ್ಲ ಹೊಯ್ಯುತ್ತಿತ್ತು. ಆಗೆಲ್ಲ ಮಡಕೆಗಳಲ್ಲಿ ನಮ್ಮಮ್ಮ ಮುಚ್ಚಿಟ್ಟಿರುತ್ತಿದ್ದ ರೊಟ್ಟಿಯ ಒಣಗಿದ ಚೂರುಗಳು ನಮಗೆ ರಿಸರ್ವ್ ಕೋಟಾದಂತೆ ತಿನ್ನಲು ಬರುತ್ತಿದ್ದುವು. ಅಮ್ಮ ಬೆಟ್ಟಗುಡ್ಡಗಳಿಗೆ ಹೋಗಿ ಸೌದೆ ಕಡಿದು ಹೊರೆ ಕಟ್ಟಿ ತಲೆ ಮೇಲೆ ಹೊತ್ತು ತಂದು ಪಟ್ಟಣದಲ್ಲಿ ಮಾರುತ್ತಿದ್ದಳು. ಫಸಲಿನ ಕೊಯ್ಲಿನ ದಿನಗಳು ಮುಗಿದವೆಂದರೆ ಮತ್ತೆ ಮಾಮೂಲು ಇದ್ದದ್ದೇ-ಕಣದ ರಾಶಿಗಳಲ್ಲಿ ಚದುರಿ ಎದ್ದಿದ್ದ ಜೋಳದ ಕಾಳನ್ನು ಆಯುವುದು.

ಹಳ್ಳಿಯ ಸ್ಕೂಲಿನಲ್ಲಿ ನಾಲ್ಕನೆ ಕ್ಲಾಸು ನಾನು ಪಾಸು ಮಾಡಿದೆ. ನಾಲ್ಕನೆಯ ಕ್ಲಾಸನ್ನು ಮುಗಿಸಿದ ನಂತರ ಹಳ್ಳಿಯಿಂದ ಮೂರು ನಾಲ್ಕು ಮೈಲಿ ದೂರವಿರುವ ಪಟ್ಟಣಕ್ಕೆ ಓದಲು ಹೋಗತೊಡಗಿದೆ. ಅಮ್ಮ ತುಂಬಾ ಕಷ್ಟದಿಂದ ಅಂಗೈ ಹುಣ್ಣಿನಂತೆ ನನ್ನನ್ನು ಜೋಪಾನವಾಗಿಡಲು ಪ್ರಯತ್ನಿಸುತ್ತಿದ್ದಳು–ಪಟ್ಟಣದಲ್ಲಿ ಶ್ರೀಮಂತ ಹುಡುಗರ ಜೊತೆ ಸೇರಿ ನಾನು ಬದಲಾಗತೊಡಗುತ್ತೇನೆ. ಅವರಂತೆಯೇ ಇಸ್ತ್ರಿ ಮಾಡಿದ ಬಟ್ಟೆಗಳನ್ನು ತೊಡಲಾರಂಭಿಸುತ್ತೇನೆ. ಈ ಎಲ್ಲವೂ ಅಮ್ಮಳ ಸಂಪಾದನೆಯ ಮೇಲೆ ಪ್ರಭಾವ ಬೀರುತ್ತಿದ್ದುವು. ಶುದ್ಧ ಉಚ್ಚಾರಣೆಗಾಗಿ ಪ್ರಯತ್ನಿಸುತ್ತೇನೆ. ನಾಟಕಗಳಲ್ಲಿ ಕೆಲಸ ಮಾಡತೊಡಗುತ್ತೇನೆ. ಸಂತೆಯ ದಿನ ಅಮ್ಮ ಸೌದೆಯ ಹೊರೆ ಹೊತ್ತು ಪಟ್ಟಣಕ್ಕೆ ಬಂದಾಗ, ಅವಳು ಎದುರು ಬದುರಾಗುವುದನ್ನು ಶ್ರೀಮಂತರ ಜೊತೆಯಲ್ಲಿರುವ ನಾನು ತಪ್ಪಿಸಿಕೊಳ್ಳಲು ಪ್ರಯತ್ನಿಸಿ ಅವಳನ್ನು ಗುರುತಿಸಿದರೂ ಗುರುತಿಸದವನಂತೆ ಹೋಗುತ್ತೇನೆ. ನನ್ನಲ್ಲಿ ಇಬ್ಬಂದಿತನ ಪ್ರವೇಶಿಸುತ್ತಿದೆ. ಟೆರೆಲಿನ್ ಶರ್ಟ್ ಒಳಗಡೆ ಅವಿತುಕೊಂಡಿರುವ ಈ ಇಬ್ಬಂದಿತನ ಇಂದಿಗೂ ಕೊನೆಗೊಂಡಿಲ್ಲ. ಹಳ್ಳಿಗೆ ಹೋದಾಗಲಂತೂ ಅಮ್ಮ ಪಡುವ ಕಷ್ಟವನ್ನು ಕಣ್ಣಿಂದ ನೋಡಲಾಗುತ್ತಿರಲಿಲ್ಲ. ಹೊತ್ತು ಹುಟ್ಟುತ್ತಲೇ ರಾಗಿ ಬೀಸುತ್ತ ಅಮ್ಮ ಹಾಡುತ್ತಿದ್ದ ಪದಗಳು ನನ್ನನ್ನು ಎಚ್ಚರಿಸಿಬಿಡುತ್ತಿದ್ದುವು, ಆ ಪದಗಳನ್ನು ಕೇಳು ಕೇಳುತ್ತ ನಾನು ತಳಮಳಗೊಂಡು ಪ್ರಕ್ಷುಬ್ಧನಾಗುತ್ತಿದ್ದೆ. ಆ ಪದಗಳ ಲಯದಿಂದ ನನ್ನ ಕಣ್ಣುಗಳಲ್ಲಿ ನನಗರಿವಿಲ್ಲದಂತೆಯೇ ಅಶ್ರುಧಾರೆ ತುಳುಕಿ ಬಿಡುತ್ತಿತ್ತು. ಆ ಪದಗಳು ಇಂದು ನೆನಪಿಲ್ಲದಿದ್ದರೂ ಅವುಗಳ ಭಾವ ಮಾತ್ರ ಇಂದಿಗೂ ನನ್ನ ಮೈಯನ್ನು ಪುಳಕಿತಗೊಳಿಸುತ್ತಿದೆ.

ಅಣ್ಣನ ಬಾವಿಯಲ್ಲಿ ನೀರು ಬತ್ತಿಹೋಗಿದೆ. ಅಂಥ ಸಮಯದಲ್ಲಿ ತಂಗಿ ಅಣ್ಣನನ್ನು ನೋಡಲು ಬರುತ್ತಾಳೆ. ನರಬಲಿ ಕೊಟ್ಟರೆ ಬಾವಿಯಲ್ಲಿ ನೀರು ಬರುತ್ತದೆ ಎಂಬ ವಿಚಿತ್ರ ಕಲ್ಪನೆ ಮಾಡಿ ಅಣ್ಣ ತನ್ನ ಹೆಂಡತಿಯೊಂದಿಗೆ ಸೇರಿಕೊಂಡು ಕುತಂತ್ರ ಮಾಡಿ, ತಂಗಿಯನ್ನು ಇಬ್ಬರೂ ಸೇರಿ ಬಾವಿಗೆ ತಳ್ಳುತ್ತಾರೆ. ಆಗ ತಂಗಿ ಹಾಡುತ್ತಾಳೆ, ಕಾಲಿನ ಉಂಗುಷ್ಠದಿಂದ ತಲೆಯ ಕೂದಲವರೆಗೆ ನೀರು ಏರುತ್ತ–ಏರುತ್ತ ಹೇಗೆ ಮೇಲೆ ಬರುತ್ತದೆಯೋ ಹಾಗೆಯೇ ಆ ಪದದ ಲಯದ ಗತಿಯೂ ಏರುತ್ತ ಹೋಗುತ್ತದೆ. ಅಣ್ಣನ ಬಾವಿಯಲ್ಲಿ ನೀರು ಉಕ್ಕಲಿ ಎಂದು ಹಾರೈಸುತ್ತ ತುಂಬ ಖುಷಿಯಿಂದ ತಂಗಿ ಆತ್ಮಸಮರ್ಪಣೆ ಮಾಡುತ್ತಾಳೆ. ಆ ಚಿಕ್ಕವಯಸ್ಸಿನಲ್ಲೂ ನನಗೆ ಏಕೋ ಏನೋ ಬಾವಿಗೆ ತಳ್ಳಿದ ಆ ಹೆಂಗಸಿಗೂ ನನ್ನ ತಾಯಿಗೂ ಏನೂ ಅಂತರವೇ ಕಾಣಲಿಲ್ಲ. ಆ ಹೆಂಗಸೇ ನನ್ನ 'ತಾಯಿ' ಎಂಬ ಭಾವನೆ ತೀವ್ರವಾಗಿ ನನ್ನನ್ನು ಕಾಡಿದೆ. ಆ ಪದವನ್ನು ಕುರಿತು ನಾನು ಆನಂತರದ ದಿನಗಳಲ್ಲಿ ಯೋಚಿಸಿದ್ದೇನೆ. ಹೀಗೆ ಯೋಚಿಸಿದಾಗಲೆಲ್ಲ ಇಡೀ ದಲಿತ ಸಮಾಜ ಬೇರೆಯಲ್ಲ, ಆ ಹೆಂಗಸು ಬೇರೆ ಅಲ್ಲ ಎಂದನ್ನಿಸಿದೆ. 'ದಲಿತ' ಶಬ್ದದ ವ್ಯಾಪಕ ಅರ್ಥವೂ ನನಗೆ ಅರಿವಾಗತೊಡಗಿತು. ಹಳ್ಳಿಯ ಹೊರಗಡೆ ವಾಸಿಸುವ ಜನರು, ಭೂಮಿಹೀನ ಕೃಷಿಕರು, ಆದಿವಾಸಿಗಳು-ಈ ಎಲ್ಲರನ್ನೊಳಗೊಂಡ ಒಂದು ವಿಶಾಲವಾದ ಕ್ಯಾನ್‌ವಾಸ್ 'ದಲಿತ' ಶಬ್ದದ ಹಿಂದೆ ನನಗೆ ಕಾಣಿಸಿಕೊಳ್ಳತೊಡಗಿತು. ದಮನಕ್ಕೆ ಒಳಗಾಗಿರುವ ಈ ಸಮೂಹ ನಿಜವಾದ ಅರ್ಥದಲ್ಲಿ ಕ್ರಾಂತಿ ಮಾಡಲು ಮುಂದಾದಲ್ಲಿ ಮಾತ್ರ ನನ್ನ ಕನಸಿನಲ್ಲಿ ತೇಲುತ್ತಿರುವ

ಸಂತೆಯ ದಿನ ಅಮ್ಮ ಸೌದೆಯ ಹೊರೆ ಹೊತ್ತು ಪಟ್ಟಣಕ್ಕೆ ಬಂದಾಗ, ಅವಳು ಎದುರಾ ಬದುರಾಗುವುದನ್ನು ಶ್ರೀಮಂತರ ಜೊತೆಯಲ್ಲಿರುವ ನಾನು ತಪ್ಪಿಸಿಕೊಳ್ಳಲು ಪ್ರಯತ್ನಿಸಿ ಅವಳನ್ನು ಗುರುತಿಸಿದರೂ ಗುರುತಿಸದವನಂತೆ ಹೋಗುತ್ತೇನೆ. ನನ್ನಲ್ಲಿ ಇಬ್ಬಂದಿತನ ಪ್ರವೇಶಿಸುತ್ತಿದೆ. ಟೆರಲಿನ್ ಶರ್ಟ್ ಒಳಗಡೆ ಅವಿತುಕೊಂಡಿರುವ ಈ ಇಬ್ಬಂದಿತನ ಇಂದಿಗೂ ಕೊನೆಗೊಂಡಿಲ್ಲ. ಹಳ್ಳಿಗೆ ಹೋದಾಗಲಂತೂ ಅಮ್ಮ ಪಡುವ ಕಷ್ಟವನ್ನು ಕಣ್ಣಿಂದ ನೋಡಲಾಗುತ್ತಿರಲಿಲ್ಲ.

**..ಭೂಮಿ ಬಾಯಿ ಬಿಡಬಾರದೆ, ಅದರಲ್ಲಿ ನಾನು ವಿಲೀನವಾಗಬಾರದೆ..ಪುಸ್ತಕಗಳ ಓದಿನಿಂದ ನನಗೇನು ಪ್ರಯೋಜನವಾಗುತ್ತಿದೆ ? ಕೆರೆಕಟ್ಟೆಗಳು ಅದೆಷ್ಟು ಪುಣ್ಯಮಾಡಿವೆ. ಹಳ್ಳಿಯಲ್ಲಿದ್ದು ದನ-ಕರು, ಕುರಿ ಮೇಯಿಸಿದ್ದರೆ ಅದೆಷ್ಟು ಚೆನ್ನಿರುತ್ತಿತ್ತು ? ಹಾಗಾಗಿದ್ದರೆ ಇಲ್ಲಿನ ಚೇಳುಗಳಿಂದ ಕುಟುಕಿಸಿಕೊಳ್ಳುವ ಅಗತ್ಯವೆ ಬರುತ್ತಿರಲಿಲ್ಲ ಎಂದು ನನಗನ್ನಿಸಿತು.**

ದೇಶ ಮೂರ್ತರೂಪ ಪಡೆಯುಬಲ್ಲದು.

ಅಂಬೇಡ್ಕರ್ ಅವರ ಆಂದೋಲನ ಹಾಗೂ ಅವರ ಸಭೆಗಳಿಂದಾಗಿ ಯಾವ ರೀತಿ ನನ್ನ ಹೊಸ ಅನುಭವಗಳು ಆಕಾರ ಪಡೆಯುತ್ತಿದ್ದುವೋ ಅದೇ ಪ್ರಕಾರದ ಭಿನ್ನ ಅನುಭವಗಳು ಅಮರ್‌ಶೇಖ್, ಅಣ್ಣಾಭಾವು ಸಾಠೆರವರ ಸಂಪರ್ಕದಿಂದ ನನಗೆ ಲಭ್ಯವಾಗತೊಡಗಿದವು. ಆ ದಿನಗಳಲ್ಲಿ ನಮ್ಮ ಜಿಲ್ಲೆ ಮಹಾರಾಷ್ಟ್ರದ ಕಮ್ಯೂನಿಸ್ಟ್ ಆಂದೋಲನದ ಮಹತ್ವಪೂರ್ಣ ಕೇಂದ್ರವಾಗಿತ್ತು. ಹೀಗೆಯೇ ಒಂದು ದಿನ ಹನುಮಾನ್ ಮಂದಿರದ ಎದುರು ಭಾಗದಲ್ಲಿ ಅಣ್ಣಾಭಾವು ಸಾಠೆಯವರ 'ಅಕ್ಲ್ ಕೀ ಬಾತ್' ಎಂಬ ನಾಟಕವನ್ನು ನೋಡಿದೆ. ಅಲ್ಲಿ ಎಂಥ ವಾತಾವರಣವಿತ್ತೆಂದರೆ ಯಾವುದೇ ಸಮಯದಲ್ಲಿ ಬೇಕಾದರೂ ಪೋಲೀಸರು ಬಂದು ಕಲಾವಿದರನ್ನು ಬಂಧಿಸಬಹುದಿತ್ತು. ಶಬ್ದಗಳ ಸಾಮರ್ಥ್ಯ ನನಗೆ ಮನದಟ್ಟಾಯಿತು. ಸರ್ಕಾರವೂ ಶಬ್ದಗಳಿಗೆ ಹೆದರುತ್ತದೆ ಎಂಬ ಹೊಸ ವಿಚಾರವೊಂದು ನನ್ನ ಗಮನಕ್ಕೆ ಬಂತು. ಇಡೀ ರಾತ್ರಿ ನಾಟಕ ನಡೆದಿತ್ತು. ಈ ನಾಟಕ ರಾಜರಾರಣಿಯರ ಪರಂಪರಾಗತ ನಾಟಕವಲ್ಲ. ನಮ್ಮ ನಾಲ್ಕೂ ಕಡೆ ಹರಡಿಕೊಂಡಿರುವ ನೋವು-ದುಃಖಗಳನ್ನು ಅನಾವರಣಗೊಳಿಸುತ್ತಿದೆ. ಈ ನಾಟಕ ಎಂಬ ಅನುಭವ ನನಗಾಗತೊಡಗಿತು. ಸಂತರೂ ಸಹ ನನ್ನನ್ನು ತೀವ್ರ ಚಿಂತನೆಗೆ ಈಡು ಮಾಡಿಲ್ಲ. 'ಕಿರಿತನವನ್ನು ನೀಡುದೇವ, ಇರುವೆಗೂ ದೊರೆಯುವುದು ಸಕ್ಕರೆ' ಎಂದು ಸಂತ ತುಕಾರಾಮ ಹಾಡಿದ್ದಾನೆ. ಈ ದೇಶದಲ್ಲಿನ ಸ್ಥಿತಿ ಹೇಗಿದೆ ಅಂದರೆ ಧರ್ಮದ ಹೆಸರಿನಲ್ಲಿ ಇರುವೆಗೆ ಬಹಳ ಸುಲಭವಾಗಿ ಸಕ್ಕರೆ ಲಭ್ಯವಾಗುತ್ತದೆ, ಆದರೆ ಜೀವಂತ ಬದುಕಿರುವ ಮನುಷ್ಯನಿಗೆ ಕುಡಿಯಲು ಒಂದು ತೊಟ್ಟು ನೀರೂ ಸಿಗುವುದಿಲ್ಲ. ಇಂಥ ದೇಶ ಇದು!

ಸ್ಕೂಲ್‌ನಲ್ಲಿ ಓದುತ್ತಿರುವಾಗಲೂ ಎಂದಿಗೂ ಮರೆಯದಂಥ ಅನುಭವಗಳು ನನ್ನ ಪಾಲಿಗೆ ಒದಗಿವೆ. ಆಗ ಲೋಕಲ್ ಬೋರ್ಡ್‌ನ ಹೆಸರಿನಲ್ಲಿ ಹಾಸ್ಟೆಲ್‌ಗಳನ್ನು ನಡೆಸುತ್ತಿದ್ದರು. ಪಟ್ಟಣದಲ್ಲಿನ ಒಂದೇ ಹಾಸ್ಟೆಲಿನಲ್ಲಿ ಎಲ್ಲ ಆದಿವಾಸಿ ಹುಡುಗರಿದ್ದರು. ಅವರ ಮಧ್ಯೆ ನಾನೊಬ್ಬನೆ ಹರಿಜನ. ಭಯಂಕರವಾದಂಥ ಮಾನಸಿಕ ಹಿಂಸೆ ಶುರುವಾಯಿತು. ಭೋಜನಾಲಯಕ್ಕೆ ಪ್ರವೇಶಮಾಡುವಂತಿರಲಿಲ್ಲ. ಬಾಗಿಲಬಳಿ ಕೂತು ಊಟಮಾಡಬೇಕಿತ್ತು.

ನಂತರ, ಹೈಸ್ಕೂಲ್ ವಿದ್ಯಾಭ್ಯಾಸಕ್ಕೆ ಬೇರೊಂದು ನಗರಕ್ಕೆ ಹೋದೆ. ಅಲ್ಲಿನ ಹಾಸ್ಟೆಲ್‌ನಲ್ಲಿ ಹರಿಜನ ವಿದ್ಯಾರ್ಥಿಗಳು ಹೆಚ್ಚು ಮಂದಿ ಇದ್ದು ಆದಿವಾಸಿಗಳು ನಾಲ್ಕಾರು ಮಂದಿಮಾತ್ರ ಇದ್ದರು. ಇಲ್ಲಿ ಈ ವಿದ್ಯಾರ್ಥಿಗಳು ಇಲಿಮರಿಗಳಾಗಿ ಹರಿಜನವಿದ್ಯಾರ್ಥಿಗಳು ದಾದಾಗಳಾಗಿರುತ್ತಿದ್ದರು. ಈ ಜಾತಿಯ ಹುಡುಗರು ನನ್ನ ಮೇಲೆ ನಡೆಸಿದ ರ್‍ಯಾಗಿಂಗ್ ಘಟನೆ ಎದೆ ಅಲ್ಲಾಡಿಸುವಂಥಾದ್ದು. ಈ ಘಟನೆಗೆ ಮೂಲ ಕಾರಣ ಹುಡುಗರಿಗೆ ಅನ್ನ ಮಾಡಿ ಹಾಕಲು ನನ್ನ ಜೊತೆ ಬಂದಿದ್ದ ನನ್ನ ತಾಯಿ. ಮುಟ್ಟಿನ ದಿನಗಳ ಸಮಯದಲ್ಲಿ ಆಕೆ ಅಡಿಗೆ ಮಾಡಿದ್ದರಿಂದ ವಿದ್ಯಾರ್ಥಿಗಳು ನನ್ನ ಪ್ರಾಣಹಾರಿ ಹೋಗುವಷ್ಟು ನನ್ನನ್ನು ಕಿಚಾಯಿಸಿದರು. ಆಗೆಲ್ಲ ಭೂಮಿ ಬಾಯಿ ಬಿಡಬಾರದೇ, ಅದರಲ್ಲಿ ನಾನು ವಿಲೀನವಾಗಬಾರದೇ ಎಂದೆನ್ನಿಸುತ್ತಿತ್ತು. ಪುಸ್ತಕಗಳ ಓದಿನಿಂದ ನನಗೇನು ಪ್ರಯೋಜನವಾಗುತ್ತಿದೆ, ಕೆರೆ ಕಟ್ಟೆಗಳ ಕಲ್ಲುಗಳು ಅದೆಷ್ಟು ಪುಣ್ಯಮಾಡಿವೆ, ಹಳ್ಳಿಯಲ್ಲಿದ್ದು ದನ-ಕರು, ಕುರಿ ಮೇಯಿಸಿದ್ದರೆ ಅದೆಷ್ಟು ಚೆನ್ನಿರುತ್ತಿತ್ತು. ಹಾಗಾಗಿದ್ದರೆ ಇಲ್ಲಿನ ಚೇಳುಗಳಿಂದ ಕುಟುಕಿಸಿಕೊಳ್ಳುವ ಅಗತ್ಯವೆ ಬರುತ್ತಿರಲಿಲ್ಲ ಎಂದು ನಿಜಕ್ಕೂ ನನಗನ್ನಿಸಿತು. ಈ ಅನಭವವನ್ನು ನಾನು ನನ್ನ 'ವಿಟಾರ್' ಎಂಬ ಕತೆಯಲ್ಲಿ ಚಿತ್ರಿಸಿದ್ದೇನೆ. ಈ ಕತೆ 'ಸಾರಿಕಾ' ಪ್ರಕಟಿಸಿದ 'ದಲಿತ ಸಾಹಿತ್ಯ ವಿಶೇಷಾಂಕದಲ್ಲಿ ಬಹಳಷ್ಟು ಚರ್ಚಿತವಾಗಿದೆ.

ಎಸ್. ಎಸ್. ಸಿ. ಪಾಸಾದ ನಂತರ ನಾವು ಮತ್ತೆ ಕಾಮಾಖಾನದಲ್ಲೇ ನೆಲಸಲು ಬಂದೆವು. ಚಿಕ್ಕಪ್ಪ ಕುಡಿತದ ಚಟದಿಂದ ಸತ್ತರು. ನನ್ನ ತಂದೆ ಬದುಕಿರುವವರೆಗೆ ಅವರು ಮಧ್ಯವನ್ನು ಕುಡಿದವರಲ್ಲ, ಆದರೆ ತಂದೆ ಸತ್ತ ಮೇಲೆ ಅವರು ಕುಡಿಯಲಾರಂಭಿಸಿದರು, Handed over taken over ಅನ್ನುತ್ತಾರಲ್ಲ ಹಾಗೆ ಮುಂದಕ್ಕೆ ಓದುವುದಕ್ಕಿಂತ ಹೆಚ್ಚಾಗಿ ಹೊಟ್ಟೆಯ ಪಾಡು ನೋಡಿಕೊಳ್ಳುವುದು ಮುಖ್ಯವಾಗಿತ್ತು. ನೌಕರಿ ಸಿಕ್ಕಿ . ಆದೂ ವಿಚಿತ್ರವಾದಂಥ ನೌಕರಿ. ನನ್ನ ಹಿಂದಿನ ಹದಿನೇಳು ವಂಶಗಳು ಮಾಡಿಕೊಂಡು ಬಂದಂಥ ನೌಕರಿಯೇ ನನ್ನ ಪಾಲಿಗೂ ಬರಬೇಕೆ? ಪರೇಲ್‌ನಲ್ಲಿ ವೆಟರ್ನರಿ ಕಾಲೇಜಿನಲ್ಲಿ ನೌಕರಿ, ಕ್ಲರ್ಕ್-ಕಮ್ - ಲ್ಯಾಬೊರೆಟರಿ ಅಸಿಸ್ಟೆಂಟ್. ನೌಕರಿಯ ಹೆಸರು ಮಾತ್ರ ದೊಡ್ಡದು. ಅಲ್ಲಿ ಅನಾಟಮಿ ವಿಭಾಗದಲ್ಲಿ ಸತ್ತ ಪ್ರಾಣಿಗಳನ್ನು ಕತ್ತರಿಸುವ, ಈ ಸತ್ತ ಪ್ರಾಣಿಗಳು ಕೊಳೆಯದಂತೆ ಅವುಗಳ ನರನಾಳಗಳಲ್ಲಿ ಅಲ್ಕೊಹಾಲ್ ತುಂಬುವುದು ನನ್ನ ಕೆಲಸವಾಗಿತ್ತು. ನನ್ನ ಕೈಕೆಳಗೆ ಕೆಲಸ ಮಾಡುತ್ತಿದ್ದ ಕ್ಲಾಸ್ ಫೋರ್ ಜನರು ಸಹ ಹರಿಜನರೇ ಆಗಿದ್ದರು. ಮಧ್ಯಾಹ್ನದ ಹೊತ್ತು ಬಿಳಿಯ ಗೌನ್‌ಗಳನ್ನು ತೊಟ್ಟು ಮಾನಸ ಸರೋವರದ ಹಂಸಗಳಂತೆ ಡಾಕ್ಟರ್ ಸ್ಟೂಡೆಂಟ್ಸ್‌ಗಳು ಬರುತ್ತಿದ್ದರು. ಅಲ್ಲಿ ಇತರೆ ಬೇರೆ ಬಗೆಯ ಕೆಲಸಗಳೂ ನನ್ನ ಪಾಲಿಗೆ ಬರುತ್ತಿದ್ದುವು. ಸರಕಾರಿ ಔಷಧಾಲಯಗಳ ವಿವಿಧ ಭಾಗಗಳಿಂದ ರೋಗಗ್ರಸ್ಥ ಪ್ರಾಣಿಗಳ ಸಗಣಿ, ಲದ್ದಿ ಪಿಚಿಕೆಗಳನ್ನು ಅನೇಕ ಶೀಶೆಗಳಲ್ಲಿ ತುಂಬಿ ಕಳಿಸುತ್ತಿದ್ದರು. ಅದನ್ನು ಗಾಜಿನ ಜಾರ್‌ಗಳಲ್ಲಿ ಹಾಕಿ ಮೇಲೆ ಕೆಳಗೆ ಕಲಸಬೇಕಾಗುತ್ತಿತ್ತು. ಬಹಳಷ್ಟು ಬೇಸರವೂ ಅಗುತ್ತಿತ್ತು. ನನ್ಮಗಂಡು, ಇಷ್ಟು ಓದಿಯೂ ನನ್ನ ಪಾಲಿಗೆ ಇದೇ ಕೆಲಸ ಹೇಗೆ ಬಂತು ? ಹೀಗೆ ಯೋಚನೆ ಮಾಡುತ್ತಲೇ ತಲೆಸಿಡಿದು ಹೋಗುವಂಥಾ ಅನುಭವವಾಗುತ್ತಿತ್ತು. ಕ್ರಮ ಕ್ರಮೇಣ ನನ್ನ ಮುಖದ ಮೇಲಿನ ನಗು ಮಾಯವಾಗುತ್ತ ಹೋಯಿತು. ದಮ್ಮು ರೋಗದವನಿಗಾಗುವಂತೆ ನನ್ನಲ್ಲೂ ಕ್ರಾಂತಿಯ ಘೋಷಣೆ ಉಕ್ಕಿ ಬಂದಂತಾಗುತ್ತಿತ್ತು. ವಾರಸುದಾರರಿಲ್ಲದ ಹೆಣಗಳನ್ನು ಹೂಳುವವರು ಮಣ್ಣು ಅಗೆಯುವಂತೆ ನನ್ನ ಮನಸ್ಸಿನಲ್ಲೂ ಆಂದೋಲನ, ಕಡಿತ ಅಗೆತವಾದಂಥ ಅನುಭವವಾಗಲಾರಂಭಿಸಿತು. ಈ ಸಂಧರ್ಭದಲ್ಲಿ ರಾಲ್ಫ್ ಎಲಿಸನ್ ಎಂಬ ಅಮೇರಿಕನ್ ನೀಗ್ರೋ ಲೇಖಕನ ಬದುಕಿನ ಒಂದು ಪ್ರಸಂಗ ನೆನಪಾಗುತ್ತಿದೆ. ಇನ್‌ವಿಸಿಬಲ್ ಮ್ಯಾನ್ ಎಂಬ ಮಹತ್ವದ ಕಾದಂಬರಿಯೊಂದನ್ನು ಆತ ಬರೆದಿದ್ದಾನೆ. ಆಶೆ ವಿಶ್ವಾಸ ಭರವಸೆಗಳು ಮನಸ್ಸಿನಲ್ಲಿ ಘನೀಭೂತವಾಗಿದ್ದಂಥದಿನಗಳಲ್ಲಿಆತನ್ಯೂಯಾರ್ಕ್‌ನ ಬಣ್ಣದ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದ. ಅಲ್ಲಿ ಬಿಳಿಬಣ್ಣದ ಬಾಟಲಿಗಳಿಗೆ ಕಪ್ಪು ಬಣ್ಣದ ಹನಿಗಳನ್ನು ತೊಟ್ಟಿಕ್ಕಿಸುವುದಷ್ಟೇ ಅವನ ಕೆಲಸ. ಆ ಮಿಶ್ರಣವನ್ನು ಎಷ್ಟರಮಟ್ಟಿಗೆ ಮಿಲಾಯಿಸುತ್ತಿದ್ದರೆಂದರೆ ಕಪ್ಪು ಬಣ್ಣದ ಸುಳಿವೂಸಿಗುತ್ತಿರಲಿಲ್ಲ. ಇದರ ಹಿಂದೆ ನೀಗ್ರೋಗಳನ್ನು ಇ[illegible]ದಂತಾಗಿಸಿಬಿಡುವ ಉದ್ದೇಶವಿದ್ದರೂ ಇರಬಹುದು ಅಥವಾ ಅವರ ಬಗ್ಗೆ ಕೊಂಚವೂ ಗಮನ ಕೊಡದಂತೆಇದ್ದುಬಿಡುವ ಉದ್ದೇಶವಿದ್ದರೂ ಇರಬಹುದು. ನನ್ನ ಬಗ್ಗೆಯೂ ಹೀಗೆಯೇ ಆಯಿತು. ಹುಕ್‌ಗೆ ನೇತು ಹಾಕಿರುವ ಪ್ರಾಣಿಗಳಮೃತಶರೀರಗಳಂತೆ ನನ್ನ ಶರೀ

ರವೂ ನೇತು ಹಾಕಲ್ಪಟ್ಟಿದೆಯೇನೋ ಎಳಬಂಥ ಭಾವ ನನ್ನಲ್ಲಿ ಮೂಡಿತು. ಈ ಎಲ್ಲ ಅನುಭವಗಂ ಶಿಲುಬೆಯನ್ನು ಹೊತ್ತು ನಾನು ಸಾಗುತ್ತಿದ್ದೇನೆ. ಆದರೆ ನನ್ನ ಹಿಂದೆ ಮಾತ್ರ ಯಾವ ಪ್ರಕಾಶ ಪುಂಜವೂ ಇಲ್ಲ. ಈಗ ನಿರ್ಮಲವಾದ, ಶಾಂತವಾದ ಶುಭ್ರವಾದ ಮುಖವನ್ನು ಹೊತ್ತು ಹೇಗೆ ಬದುಕಲು ಸಾಧ್ಯ ಎಂಬ ಪ್ರಶ್ನೆ ನನ್ನನ್ನು ಕಾಡುತ್ತಿದೆ.

ಈ ಎಲ್ಲ ದುಃಖ 'ಪ್ಲೆಟೋನಿಕ್ ಲವ್' ಎಂದು ಹೇಳುತ್ತಾರಲ್ಲ, ಈ ಕಲ್ಪನೆಯ ಎದುರಿನಲ್ಲಿ ತಣ್ಣಗಾಯಿತು. ನನ್ನ ಲೈಲಾ ಯಾವುದೋ ಒಂದು ದೊಡ್ಡ ಹವೇಲಿಯಲ್ಲಿರಬಹುದು, ಈ ನಾನು ಅಂದರೆ ಮಜನು ಫುಟ್‌ಪಾತ್‌ನಲ್ಲಿದ್ದೇನೆ ಎಂಬ ಭಾವನೆ ನನ್ನಲ್ಲಿ ತೀವ್ರವಾಗುತ್ತ ಹೋಯಿತು. ತನ್ನ ವಾಸ್ತವಿಕ ಪರಿಸ್ಥಿತಿಯನ್ನು ಮರೆಯಲು ಮದ್ಯದ ಸಹವಾಸಕ್ಕೆ ಹೋಗುವ ವ್ಯಕ್ತಿಯಂತಾಗಿತ್ತು ನನ್ನ ಸ್ಥಿತಿ ಕೂಡ. ನಾನು ಆ ದಿನಗಳಲ್ಲಿ ಅನೇಕ ರೋಮ್ಯಾಂಟಿಕ್ ಕವಿತೆಗಳನ್ನು ಬರೆದೆ. ಮರಾಠಿಯ ಪ್ರತಿಷ್ಠಿತ ಪತ್ರಿಕೆಗಳಲ್ಲಿ ಪ್ರಕಟವಾದುವು ಕೂಡ. ವಿರಹ ಗೀತೆಗಳಲ್ಲಿನ ಪ್ರೇಯಸಿಯ ಮುಖಮಲ್ಲಿನ ದಿಂಬು ಆಕೆಯ ಕಣ್ಣೀರಿನಿಂದ ತೊಯ್ದುಬಿಡುವಂತೆ ನಾನು ಬರೆಯುತ್ತಿದ್ದೆ. ಆದರೆ ವಾಸ್ತವ ಸಂಗತಿ ಎಂದರೆ ನನ್ನ ಪ್ರೇಯಸಿಯ ದಿಂಬು ಮುಖಮಲ್ಲಿನದಾಗಿತ್ತೇನು ? ನಿಜ ಹೇಳಲೆ? ಆಕೆ ಒಂದು ಅನಾಥಾಲಯದಲ್ಲಿ ಓದುತ್ತಿದ್ದಳು. ಎಸ್. ಎಸ್. ಸಿ. ಗೆ ಬರುವವರೆಗೂ ಆಕೆಯ ಕಾಲುಗಳು ಚಪ್ಪಲಿ ಹೇಗಿರುತ್ತದೆ ಎಂಬುದನ್ನು ಅನುಭವಿಸಿರಲಿಲ್ಲ. ಆಕೆಯ ತಂದೆ ಓರ್ವ ಶ್ರೀಮಂತನ ಬಂಗಲೆಯ ಗೇಟ್‌ನ ಬಳಿ ಇದ್ದ ಗ್ಯಾರೇಜ್‌ನಲ್ಲಿ ವಾಸಿಸುತ್ತಿದ್ದರು. ಒಂದು ತ್ರಿಕೋನಾಕಾರದ ಜೋಪಡಿಯಂತಿದ್ದ ಮನೆಯಲ್ಲಿ ಹರಿದ ಬಟ್ಟೆಯ ಮೇಲೆ ಮೊಣಕೈಯನ್ನೇ ತಲೆದಿಂಬನ್ನಾಗಿ ಮಾಡಿಕೊಂಡಿದ್ದನ್ನು ನಾನು ನೋಡಿದ್ದೇನೆ. ನಾನು ಎಷ್ಟು ಅನುಭವಿಸಿದ್ದೇನೋ ಅದರ ಹತ್ತರಷ್ಟನ್ನು ಅವರು ಅನುಭವಿಸಿದ್ದಾರೆ. ನಾನು ಅನುಭವಿಸಿದ್ದನ್ನು ನಾನು ಶಬ್ದಗಳ ಮೂಲಕ ಡಂಗೂರ ಹಾಕುತ್ತೇನೆ. ಆದರೆ ಅವರು ತನ್ನೆಲ್ಲ ದುಃಖ ದುಮ್ಮಾನವನ್ನು ತಮ್ಮ ನಿಟ್ಟುಸಿರಿನಲ್ಲಿ ಲೀನಗೊಳಿಸಿಕೊಂಡಿದ್ದಾರೆ, ಅಷ್ಟೆ ವ್ಯತ್ಯಾಸ.

## ಅನುಭವದ ಗಣಿಯಿಂದ

1967 ರಿಂದ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಧ್ಯೇಯ ಧೋರಣೆಗಳು ಬದಲಾಗತೊಡಗಿದವು. ಈ ಮಧ್ಯೆ ದಲಿತ ಸಾಹಿತ್ಯ ಆಂದೋಲನಕ್ಕೆ ಚಾಲನೆ ಸಿಕ್ಕಿತು. ಈ ಆಂದೋಲನದಲ್ಲಿ ಆರಂಭದಿಂದಲೂ ನಾನು ಕ್ರಿಯಾಶೀಲನಾಗಿದ್ದೇನೆ, ಆಗಾಗ ನಡೆಯುತ್ತಿದ್ದ ಸಾಹಿತ್ಯಿಕ ಚರ್ಚೆಗಳು ನನ್ನ ತಿಳುವಳಿಕೆಯ ಪರಿಧಿಯನ್ನು ಹೆಚ್ಚಿಸುತ್ತ ಹೋಗಿವೆ. ನನ್ನ ವಿಚಾರಗಳು ಮಥನಕ್ಕೀಡಾಗಿವೆ. ಒಂದು ಮಹತ್ವದ ಚರ್ಚೆ ಇಂದಿಗೂ ನನ್ನ ನೆನಪಿನಲ್ಲುಳಿದಿದೆ. ಅದು 'ಬುದ್ಧ ಮತ್ತು ಮಾರ್ಕ್ಸ್' ನನ್ನು ಕುರಿತಂಥ ಚರ್ಚೆ. ಸೀದಾ-ಸಾದಾ ವಾದ-ವಿವಾದದಲ್ಲಿ ಎರಡು ಗುಂಪುಗಳಾದುವು. ಈ ಚರ್ಚೆಯಲ್ಲಿ ಮಾರ್ಕ್ಸ್‌ವಾದಿ ಚಿಂತಕರಾದ ಡಿ. ಕೆ. ಬೇಡೇಕರ್ ಉಪಸ್ಥಿತರಿದ್ದರು. ಅವರು ಚರ್ಚೆಯಲ್ಲಿ ಸಮನ್ವಯ ಮಾಡುತ್ತ ಹೀಗೆ ಹೇಳಿದರು-ಒಬ್ಬ ವ್ಯಕ್ತಿ ಒಂದೇ ಸಮಯದಲ್ಲಿ ಬುದ್ಧ ಮತ್ತು ಮಾರ್ಕ್ಸ್‌ನ ದರ್ಶನವನ್ನು ಒಂದೇ ಅರ್ಥದಲ್ಲಿ ಸ್ವೀಕರಿಸಬಹುದಾಗಿದ್ದು ಇದರಲ್ಲಿ ಯಾವ ಅಸಂಗತವೂ ಇಲ್ಲ' ಹೀಗೆ ನಾನು ಸ್ವೀಕರಿಸಿದ್ದೇನೆ. ಅವರ ಮಾತುಗಳು ನನಗೆ ಹೊಸ 'ದರ್ಶನ' ವನ್ನೇ ನೀಡಿದುವು, ಪರಂಪರಾಗತ ಪುಸ್ತಕಗಳನ್ನೋದಿ ಮಾರ್ಕ್ಸ್‌ವಾದಿಗಳಾದವರ ವಿಚಾರಗಳಿಗಿಂತ ಅವರ ವಿಚಾರಗಳು ಭಿನ್ನವಾಗಿ ಕಂಡವು. ನಾನು ಮನಸ್ಸಿನಲ್ಲೇ ಯೋಚಿಸತೊಡಗಿದೆ. ತಾಳೆ ಹಾಕಲಾರಂಭಿಸಿದೆ. ಇದಕ್ಕೂ ಮುಂಚೆ ನಾನು ಡಾ॥ ಅಂಬೇಡ್ಕರ್‌ರ 'ಬುದ್ಧ ಮತ್ತು ಮಾರ್ಕ್ಸ್' ಎಂಬ ಲೇಖನವನ್ನು ಓದಿದ್ದೆ, ಬುದ್ಧ ಸ್ವೀಕರಿಸಿದ್ದ ದುಃಖ ಆತ್ಮ. ಪುನರ್ಜನ್ಮ. ಕರ್ಮವಾದದಿಂದುದ್ಭವಿಸಿದ ದುಃಖವಾಗಿರದೆ ಸುತ್ತಮುತ್ತ ನೆಲೆಗೊಂಡು ಬೇರು ಬಿಟ್ಟ ಶೋಷಕರಿಂದಾಗುತ್ತಿದ್ದ ಶೋಷಣೆಯ ಫಲವಾಗಿ ಉದ್ಭವಿಸಿದ ದುಃಖವಾಗಿತ್ತು. ಹೀಗೆ ಲೇಖನದ ಸಂಬಂಧ ಬೆಳೆಯತೊಡಗಿತು. ಅನುಭವಗಳ ಮಟ್ಟದಲ್ಲಿ ಬುದ್ಧ ಮತ್ತು ಮಾರ್ಕ್ಸ್ ಎರಡು ದೀಪಸ್ತಂಭಗಳೆಂದು ನನ್ನಗನ್ನಿಸಿತು. ಬುದ್ಧನನ್ನು ಪರಂಪರಾಗತ ದೃಷ್ಟಿಯಿಂದ ನನ್ನಿಂದ ನೋಡಲು ಸಾಧ್ಯವಾಗಿಲ್ಲ. ಇದೇ ಅವಧಿಯಲ್ಲಿ ತರುಣ ಕ್ರಾಂತಿಕಾರಿ ಕವಿ ಸುಕ್ರಾಂತ್ ಭಟ್ಟಾಚಾರ್ಯರ ಕೆಲವು ಕವಿತೆಗಳನ್ನು ಓದುವಂಥ ಅವಕಾಶವಾಯಿತು. ತಮ್ಮ ಕವಿತೆಗಳ ಮೂಲಕ ಕ್ರಾಂತಿಕಾರಕ ವಿಚಾರಗಳನ್ನು ಹೊತ್ತು ತಂದ ಈ ಕವಿ ನನಗೆ ತುಂಬ ಮಹಾನ್ ಎಂದು ಕಾಣಿಸಿದ ಶೈಲಿಯ ದೃಷ್ಟಿಯಿಂದ ನನ್ನ 'ಕೊಂಡವಾಡ' (ಕಾಂಜಿ ಹೌಸ್) ಕವಿತಾ ಸಂಗ್ರಹದ ಕವಿತೆಗಳಲ್ಲಿ ಈ ಕವಿತೆಯ ಪ್ರಭಾವವನ್ನು ಸ್ಪಷ್ಟವಾಗಿ ನೋಡಬಹುದು. ಕವಿತೆಗಳಿಗೆ ಹೋಲಿಸಿದರೆ ನಾನು ಕವಿತೆಗಳನ್ನು ಕಡಿಮೆ ಬರೆದಿದ್ದೇನೆ. ನನ್ನ ಮೊದಲ ಕಥೆ ಪ್ರಕಟವಾದದ್ದು 1973.ರಲ್ಲಿ.

ಹಾಗೆ ನೋಡಿದರೆ ಸಮಾಂತರ ಆಂದೋಲನದ ಪರಿಚಯ ನನಗೆ ಆದದ್ದು ಕೊಂಚ ತಡವಾಗಿಯೇ. ಟಿ. ವಿ.ಯ 'ಪರಿಕ್ರಮಾ' ಕಾರ್ಯಕ್ರಮದ ಸಂದರ್ಭದಲ್ಲಿ ಐದು ವರ್ಷಗಳ ಹಿಂದೆ ನನಗೆ ಕಮಲೇಶ್ವರ್ ಅವರ ಪರಿಚಯವಾಯಿತು. ಈ ಪರಿಚಯವಾದದ್ದು ಶ್ರೀ. ಪ್ರ. ಶ್ರೀ. ನೆರೂರ್‌ಕರ್‌ರವರ ಕೃಪೆಯಿಂದಲೇ. ಇದಕ್ಕೆ ಮುಂಚೆ 'ಸಾರಿಕಾ' ವನ್ನು ನಾನು ಎಂದೂ ಓದಿರಲಿಲ್ಲ. ಆದರೆ ಓದಲಾರಂಭಿಸಿದ ಮೇಲೆ ನನ್ನ ಅಂತರಂಗ–ಬಹಿರಂಗವೆಲ್ಲ ನಡುಗಿತು. ಭಾಷೆಗಳ ಗೋಡೆಗಳು ನಮ್ಮ ಮಧ್ಯೆ ಇರುವುದರಿಂದ ಎಂಥ ಮೌಲಿಕ ವಿಚಾರ–ಚಿಂತನೆಯಿಂದ ನಾನು ಈವರೆಗೆ ವಂಚಿತನಾಗಿದ್ದೆ ಎಂಬುದರ ಅರಿವಾಯಿತು ನನಗೆ. ಸಮಾಂತರ ಆಂದೋಲನದ ನಿಜವಾದ ಪರಿಚಯ ಕಲ್ಲಿಕೋಟೆಯಲ್ಲಿ ನಡೆದ 'ಸಮಾಂತರ ಗೋಷ್ಠಿಯಲ್ಲಾಯಿತು. ದಲಿತ ಲೇಖಕರಲ್ಲಿ ಈಗೋಷ್ಠಿಯ ಭಾಗವಹಿಸದ ಮೊದಲ ಲೇಖಕ ನಾನು ಮರಾಠಿಯಲ್ಲಿ ಸಾಹಿತ್ಯಿಕ ವಿಷಯಗಳ ಚರ್ಚೆ ತುಂಬಾ ನೀರಸ, ಲಯ ಏರಿಳಿತ, ಅನುಭವಗಳ ಆಳ, ತಟಸ್ಥತೆ ಮತ್ತು ಕಲ್ಪನೆಯ ಆಧಾರದ ಮೇಲೆ ಸೂಕ್ಷ್ಮಗಳಿಗೆ ಹೋಗುವ ಆ ಚರ್ಚೆಗೆ ಹೋಲಿಸಿದರೆ ಇಲ್ಲಿ ದೈನಂದಿನ ಬದುಕಿನ ಸಮಸ್ಯೆ–ತೊಡಕುಗಳ ಬಗ್ಗೆ ಚರ್ಚೆ ಸಾಗಿತು. ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ ವಿಷಯಗಳ ಬಗ್ಗೆ ವಿಸ್ತಾರವಾದ ಚರ್ಚೆ ನಡೆಯಿತು. ಈ ಎಲ್ಲವನ್ನು ಕುರಿತು ಚರ್ಚಿಸುವಂಥ ಹಕ್ಕು ಲೇಖಕರಿಗಿಲ್ಲದೆ ಹೋದಲ್ಲಿ ಅವರ ಸಾಹಿತ್ಯ ಕುಬ್ಜವಾಗುತ್ತದೆ, ಜೋಲುಮೋರೆಯದಾಗುತ್ತದೆ. ಸಮಾಜದಿಂದ ದೂರ ಸರಿಯುತ್ತದೆ. ಅಲೆಮಾರಿಯಾಗುತ್ತದೆ ಎಂದೆಲ್ಲ ತಿಳುವಳಿಕೆ ಸಮಾಂತರ

ಹುಕ್‌ಗೆ ನೇತು ಹಾಕಿರುವ ಪ್ರಾಣಿಗಳ ಮೃತ ಶರೀರಗಳಂತೆ ನನ್ನ ಶರೀರವೂ ನೇತು ಹಾಕಲ್ಪಟ್ಟಿದೆಯೇನೋ ಎಂಬಂಥ ಭಾವ ನನ್ನಲ್ಲಿ ಮೂಡಿತು. ಈ ಎಲ್ಲ ಅನುಭವಗಳ ಶಿಲುಬೆಯನ್ನು ಹೊತ್ತು ನಾನು ಸಾಗುತ್ತಿದ್ದೇನೆ. ಆದರೆ ನನ್ನ ಹಿಂದೆ ಮಾತ್ರ ಯಾವ ಪ್ರಕಾಶಪುಂಜವೂ ಇಲ್ಲ. ಈಗ ನಿರ್ಮಲವಾದ, ಶಾಂತವಾದ, ಶುಭ್ರವಾದ ಮುಖವನ್ನು ಹೊತ್ತು ಹೇಗೆ ಬದುಕಲು ಸಾಧ್ಯ ಎಂಬ ಪ್ರಶ್ನೆ ನನ್ನನ್ನು ಕಾಡುತ್ತಿದೆ.

## ಡಾಂಬರ ಬದುಕು

ಡಿ. ಹೊಸಳ್ಳಿ ಶಿವು

ನಮ್ಮ ಕಛೇರಿ ಮುಂದಿನ ರಸ್ತೆ
ಒರಟು ಗಾಯಗಳ ಸಹಿಸಿ ಮಲಗಿತ್ತು
ಒಂದು ಮುಂಜಾನೆ ಆ ರಸ್ತೆಯಲ್ಲಿ
ಪುಟ್‌ಪಾತ್ ಅಂಗಡಿ ಬಿಚ್ಚುಕೊಂಡು
ಕಪ್ಪು ಬೆರೆತ ಕಾರ್ಮೋಡ ಜನ
ಕರ್ಕಶ ಶಬ್ದದೊಂದಿಗೆ ಛೀಳಿಡುತ್ತಾ
ರಸ್ತೆಗೆ ರೂಪುಕೊಡಲು ಸಜ್ಜಾಗಿ
ರಸ್ತೆಯಷ್ಟೆ ಚಿಂದಿಸ್ವರೂಪ ಜನ
ಅಸ್ತವ್ಯಸ್ತ ಜಲ್ಲಿಕಲ್ಲುಗಳ ರೂಪತಾಳಿ

ಉರಿಬಿಸಿಲಿಗೆ ಮೈಯಾನಿಸಿ
ತಾರೆಣ್ಣೆಯಾಗಿ ಜಿನುಗಿದರು ಕ್ಷಣದಲಿ
ಹೆಪ್ಪುಗಟ್ಟಿದ ತಾರಿನ ಮೇಲೆ
ಸರ್ಕಾರಿಯ ರಾಕ್ಷಸಿ ಯಂತ್ರವೊಂದು
ಹೆಣಭಾರ ಬಿಟ್ಟು ಉರುಳಾಡಿದಾಗ
ಹಾಸು ಚಪ್ಪಡಿಗಳಾದ ಡಾಂಬರ ಮೇಲೆ
ಬಸ್ಸು ಕಾರು ಸ್ಕೂಟರುಗಳು ಮೈತೆತ್ತು
ಧೋ ವೇಗದಲಿ ತೇಲುವುದ ನೋಡಿ
ಸೋಮಾರಿಗಳಾದ ನಾವು ಕಛೇರಿಯಲ್ಲೇ ಸಕ್ಕಾಗ
ರಸ್ತೆಯೆಲ್ಲ ಕೆಂಪಾದಂತೆ ಕಂಡಿತು.

**ನನ್ನ ಒಳಗೆ ಬೇಯುತ್ತಿರುವ ಜ್ವಾಲಾಮುಖಿ ಮುಗಿದುಹೋದ ದಿನ ನಾನು ಬದುಕಿದ್ದರೂ ನಿಜವಾದ ಅರ್ಥದಲ್ಲಿ ಸತ್ತಂತೆ. ನಂತರ ಈ ಚೇತನರಹಿತ ಶವವನ್ನು ಹೊರುವುದೆಂದರೆ ನನಗೆ ತುಂಬಾ ಕಷ್ಟದ ಕೆಲಸ, ದುಃಖದ ಪ್ರಯಾಸ.**

ಗೋಷ್ಠಿಯ ಕಾರಣದಿಂದಾಗಿ ನನ್ನಲ್ಲಿ ಪ್ರಬಲವಾಗುತ್ತ ಹೋಯಿತು. ಅನಂತರ ಸಮಾಂತರ ಕತೆಗಳ ವಿಶೇಷಾಂಕಗಳನ್ನು 'ಸಾರಿಕಾ' ಪ್ರಕಟಿಸಿತು. ಇಲ್ಲಿ ಪ್ರಕಟಗೊಂಡ ಕತೆಗಳು ಮನಸ್ಸಿನಲ್ಲಿ ಭಾವನೆಗಳ ಬುಗ್ಗೆಗಳನ್ನು ಚಿಮ್ಮಿಸಿತು. ನನ್ನ ಅನಿಸಿಕೆಗಳನ್ನೇ ಈ ಲೇಖಕರು ಬರೆಯುತ್ತಿದ್ದಾರೆ ಎಂದೆನ್ನಿಸಿತು.

ಕಳೆದ 10 ವರ್ಷಗಳಿಂದ ಸರ್ಕಾರಿ ವಿಭಾಗವೊಂದರಲ್ಲಿ ಆಡಿಟರ್ ಆಗಿ ನೌಕರಿ ಮಾಡುತ್ತಿದ್ದೇನೆ. ಎಲ್ಲ ಕಳೆದು 500–600 ರೂ ಕೈಗೆ ಬರುತ್ತದೆ. ಬೇಯುವ ಈ ತುಟ್ಟಿಕಾಲದಲ್ಲಿ ಸಂಸಾರದ ಆವಶ್ಯಕತೆಗಳ ಕಂದರಗಳನ್ನು ತುಂಬುತ್ತ ತುಂಬುತ್ತ ಉಸಿರು ಕಟ್ಟಿ ಬರುತ್ತದೆ. ಹೋದ ವರ್ಷ ಹಿರಿಯ ಮಗಳ ಮದುವೆ ಮಾಡಿದೆ. ನನ್ನ ನಲ್ವತ್ತನೆಯ ವರ್ಷದಲ್ಲಿ ನಾನು ತಾತ ಅನ್ನಿಸಿಕೊಂಡೆ. ನನ್ನನ್ನು ನೋಡಿದರೆ ಮಗಳ ಮದುವೆ ಮಾಡಿ ತಲೆ ತುಂಬ ಸಾಲ ಹೊತ್ತು ನಾ ನಿಂತಿದ್ದೇನೆ ಎಂದು ನನ್ನನ್ನು ನೋಡಿದ ಅನೇಕರು ನಂಬುವುದಿಲ್ಲ. ನನ್ನ ತಂದೆಯ ಹಾಗು ನನ್ನ ಬದುಕಿನಲ್ಲಿ ಸ್ವಾತಂತ್ರ್ಯ ನಂತರವೂ ಒಂದು ಎಳ್ಳುಕಾಳಿನಷ್ಟೂ ಅಂತರ ಬಂದಿಲ್ಲವೆಂದು ನನಗನ್ನಿಸುತ್ತದೆ. ನನ್ನ ಐದಾರು ವರ್ಷದ ಚಿಕ್ಕ ಮಗನನ್ನು ನೋಡಿದಾಗ ನನಗನ್ನಿಸುತ್ತೆ : ಈತನ ಬದುಕು ನನ್ನ ಬದುಕಿನಂತೆಯೇ ಆಗುವುದೇನು? ಎಂದು. ಕಳೆದ 15–16 ವರ್ಷಗಳಿಂದ ಬಾಡಿಗೆ ಮನೆಯಾದರೂ ಸರಿ, ಒಂದು ಸೂರು ಸಿಕ್ಕಲಿ ಎಂದು ಈ ಮಹಾನಗರದಲ್ಲಿ ಅದೆಷ್ಟು ಸುತ್ತಿದ್ದೇನೆ. ಕೆಲವು ವರ್ಷ ಶಿವಡಿಯ ರೇಲ್ವೆಲೈನ್‌ಗೆ ಹೊಂದಿಕೊಂಡಿದ್ದ ಒಂದು ಗುಡಿಸಲಲ್ಲಿ ವಾಸವಾಗಿದ್ದೆ. ಐದು ವರ್ಷಗಳ ಹಿಂದೆ ಬಹಳ ಪ್ರಯಾಸದಿಂದ ಬಡಾವಣೆಯಲ್ಲಿ ಒಂದು ಮನೆ ಸಂಪಾದಿಸಿದೆ. ಇದನ್ನೂ ನೀವು ಮನೆ ಅನ್ನುವಿರೇನು? ತಗಡಿನ ಗೋಡೆಗಳು, ಮೇಲೆ ಸಿಮೆಂಟ್ - ಶೀಟ್‌ಗಳು, ನಮ್ಮ ಮನೆಯಲ್ಲಿನ ಮಾತುಕತೆಗಳನ್ನು ಪಕ್ಕದ ಮನೆಯವರು ಸುಲಭವಾಗಿ ಕೇಳಿಸಿಕೊಳ್ಳಬಹುದು. ನನ್ನ ಜೀವನವೇ ಸಾರ್ವಜನಿಕವಾಗಿದೆಯೇನೋ ಎಂಬಂಥ ಅನುಭವವಾಗುತ್ತಿದೆ.

ಎಂದಾದರೊಂದು ದಿನ ನಾನು ಧನವಂತನಾಗಬೇಕು ಎಂಬ ಕನಸನ್ನು ನಾನು ಎಂದೂ ಕಂಡವನಲ್ಲ. ನನ್ನ ಆರ್ಥಿಕ ಸ್ಥಿತಿಯನ್ನು ಸುಧಾರಿಸಿಕೊಳ್ಳಲು ರಾಜಕೀಯ ವಹಿವಾಟು, ಆಟಗಳನ್ನಾಡುವುದಾಗಲಿ ಅಥವಾ ಬೇಡಿಕೆಗನುಸಾರ ಸಸ್ತಾ ಸಾಹಿತ್ಯ ಬರೆಯುವುದಾಗಲಿ ನನ್ನಿಂದ ಸಾಧ್ಯವಾಗಿಲ್ಲ. ಅದನ್ನು ನಾನು ಇಷ್ಟಪಟ್ಟೂ ಇಲ್ಲ. ರಾಜಕೀಯಕ್ಕೆ ಹೋಗುವ ಮೋಹದ ಕ್ಷಣಗಳು ಆಗಾಗ ಬರುತ್ತವೆ. ತುರ್ತು ಪರಿಸ್ಥಿತಿಯ ಸಂಧರ್ಭದಲ್ಲಿ ರಾಷ್ಟ್ರೀಯ ಲೇಖಕ ಸಂಘದಿಂದ ದೆಹಲಿಯಲ್ಲಿ ಭಾರತೀಯ ಲೇಖಕರ ಒಂದು ಸಮ್ಮೇಳನ ನಡೆಯಿತು. ಅದರಲ್ಲಿ ಮಾಜಿ ಪ್ರಧಾನ ಮಂತ್ರಿ ಇಂದಿರಾಗಾಂಧಿಯವರು ಹಾಜರಿದ್ದರು. ಈ ಸಮ್ಮೇಳನದಲ್ಲಿ ಭಾಗವಹಿಸಬೇಕೆಂದು ಕೋರಿ ನನಗೆ ಆಹ್ವಾನ-ಪತ್ರ ಹಾಗೂ ವಿಮಾನದ ಟಿಕೆಟ್ ಬಂದಿದ್ದವು. ದೆಹಲಿಯಲ್ಲಿ ಪಂಚತಾರಾ ಹೋಟೆಲ್‌ನಲ್ಲಿಳಿಸುವ ವ್ಯವಸ್ಥೆ ಇತ್ತು. ಇಂದಿನವರೆಗೆ ನಾನು ವಿಮಾನವೇರಿಲ್ಲ. ಒಂದು ಕ್ಷಣ ಮನಸ್ಸು ವಿಚಲಿತಗೊಂಡರೂ ನನ್ನ ಒಳಗಿನ ಆತ್ಮ ನನ್ನನ್ನು ಈ ಮೋಹದಿಂದ ಗೆಲ್ಲಿಸಿತು. ನನ್ನ ಒಳಗೆ ಬೇಯುತ್ತಿರುವ ಜ್ವಾಲಾಮುಖಿ ಮುಗಿದುಹೋದ ದಿನ ನಾನು ಬದುಕಿದ್ದರೂ ನಿಜವಾದ ಅರ್ಥದಲ್ಲಿ ಸತ್ತಂತೆ, ನಂತರ ಈ ಚೇತನರಹಿತ ಶವವನ್ನು ಹೊರುವುದೆಂದರೆ ನನಗೆ ತುಂಬಾ ಕಷ್ಟದ ಕೆಲಸ, ದುಃಖದ ಪ್ರಯಾಸ.

(ಮುಗಿಯಿತು)

## ಹೋರಾಟದ ನೆಲದಲ್ಲಿ ಅಂಬೇಡ್ಕರ್ ಜಯಂತಿ

ಹಸಿದ ಬಡವರೆಲ್ಲರು ಸೇರಿ ಹೆಗ್ಗಡದೇವನ ಕೋಟೆ ತಾಲ್ಲೂಕಿನ ದೇವಲಾಪುರದ ಕುರುಚಲು ಕಾಡನ್ನು ಕಡಿದು ಭೂಮಿಗಾಗಿ ಹೋರಾಡುತ್ತಿರುವ ವಿಷಯ ಎಲ್ಲರಿಗೂ ತಿಳಿದಿದೆ. ದಲಿತ ಸಂಘರ್ಷ ಸಮಿತಿಯ ನೆರಳಲ್ಲಿ ಒಂದಾಗಿರುವ ಈ ಬಡವರ ಸಂಘಟನೆಗೆ ಈಗ ಹೊಸ ತಿರುವು ಬಂದಿದೆ.

ಏಪ್ರಿಲ್ 10 ರಂದು ಶನಿವಾರ ಮಧ್ಯಾಹ್ನ ನಾನು ದೇವಲಾಪುರಕ್ಕೆ ಹೊರಟಾಗ, ಅದೇ ಬಸ್ಸಿನಲ್ಲಿ ಸರಗೂರಿನಿಂದ ಬರುತ್ತಿದ್ದ ಕೆಲವರನ್ನು ಕೇಳಿದಾಗ ಇಂದು ಅಂಬೇಡ್ಕರ್ 'ಉಸ್ತವ' ಎಂದರು. ದೇವಲಾಪುರಕ್ಕೆ ಬಂದಾಗ ಯುಗಾದಿಯ ತೋರಣಗಳು ರಾರಾಜಿಸುತ್ತಿದ್ದವು. ಅಂದು ರಾಮನವಮಿಯಂತೆ!

ಸಂಜೆಹೊತ್ತಿಗೆ ಕಾರ್ಯಕ್ರಮಗಳು ಪ್ರಾರಂಭವಾದವು. ದೇವಲಾಪುರದಲ್ಲಿ ಹೊಸತಿರುವು. ಇತಿಹಾಸದಲ್ಲೆ ಒಂದು ಬದಲಾವಣೆ. ರಾಮನವಮಿಯನ್ನು ಇದುವರೆಗೆ ಆಚರಿಸುತ್ತ ಬಂದಿದ್ದ ಈ ಜನರು ಇಂದು ಅಂಬೇಡ್ಕರ್ ಜಯಂತಿಯನ್ನು ಬಹಳ ಸಂಭ್ರಮ ಸಡಗರದಿಂದ ಆಚರಿಸುತ್ತಿದ್ದರು. ಮೈಕಿನಲ್ಲಿ ಹೋರಾಟದ ಹಾಡುಗಳು ಮೊಳಗಿ ಸುತ್ತಲ ಗ್ರಾಮಗಳಿಗೂ ದಿಗಿಲು ಹುಟ್ಟಿಸಿತ್ತು. ಕಾರ್ಯಕ್ರಮದ ಅಂಗವಾಗಿ ತಾಲ್ಲೂಕು ದ. ಸಂ. ಸ.ಯ ಸಂಚಾಲಕ, ಕೊಡಗಿನ ಗಣೇಶ್, ಕಂದೆಗಾಲ ಶಿವಣ್ಣ ಮಾತಾಡಿದರು. ಜನರ ಸಂಘಟನೆ ಯಾವ ಸರ್ಕಾರ ಯಾವ ಬಂಡವಾಳಶಾಯಿ ಶಕ್ತಿಯನ್ನೂ ಎದುರಿಸಬಲ್ಲದೆಂಬುದಕ್ಕೆ ದೇವಲಾಪುರದ ಹೋರಾಟವೇ ಸಾಕ್ಷಿ ಎನ್ನುತ್ತಾ; ಅಂಬೇಡ್ಕರ್ ಬಾಲ್ಯ, ಹುಟ್ಟಿನಿಂದ ಕೊನೆವರೆಗೆ ಅವರ ಸಾಧನೆ, ದೇಶದ ಸಮಸ್ತ ದಲಿತರಿಗಾಗಿ ಹೋರಾಡಿದ ಅವರ ಧೀರತ್ವವನ್ನು ತಿಳಿಸಿದರು.

ಕಾರ್ಯಕ್ರಮ ಮುಗಿದ ನಂತರ ಮೆರವಣಿಗೆ ಪ್ರಾರಂಭವಾಯಿತು. ಬೀದಿ ಬೀದಿಗಳಲ್ಲೆಲ್ಲ ಅಂಬೇಡ್ಕರ್ ಫೋಟೋವನ್ನು ಪಲ್ಲಕ್ಕಿಯಲ್ಲಿ ಕೂರಿಸಿ ಹೊರಟರು. ಧೀರನಾಯಕನಿಗೆ ಗೌರವ ಸೂಚಿಸಲು ಸತ್ತಿಗೆಗಳು ತಮಟೆ, ವಾದ್ಯಗಳು ಮುಗಿಲು ಮುಟ್ಟುವಂತೆ ಮೊಳಗುತ್ತಿದ್ದವು. ರಾಮನ ಫೋಟೋ ಇರಬೇಕಾಗಿದ್ದ ಪಲ್ಲಕ್ಕಿಯಲ್ಲಿ ಅಂಬೇಡ್ಕರ್ ಫೋಟೋ ರಾರಾಜಿಸುತ್ತಿತ್ತು. ರಾತ್ರಿಯಲ್ಲಿ ಬೀದಿ ಬೀದಿಗಳಲ್ಲಿ ಕುಣಿತ, ಕೋಲಾಟ ಸಾಗೇ ಇತ್ತು. ಬೆಳಿಗ್ಗೆ 5-30 ರವರೆಗೆ ಮೆರವಣಿಗೆ ಮುಂದುವರಿದು ಸಾಗಿತ್ತು !

—ಕೊಡಗಿನ ಗಣೇಶ್

## ನೂತನ ಸರ್ಕಾರದ ನೂರು ದಿವಸ :

### ದೃಢನಿಲುವು – ದಿಟ್ಟ ಹೆಜ್ಜೆ

ಜನತೆ ನಮಗಿತ್ತಿರುವ ಆದೇಶ, ಅಧಿಕಾರಗಳ ನಿಜವಾದ ಅರ್ಥ — ಈವರೆಗೆ ನೀಡಿದ ಆಶ್ವಾಸನೆಗಳ ಈಡೇರಿಕೆ.

ಈ ನೂರು ದಿನಗಳ ಅವಧಿಯಲ್ಲಿ ಮೂಲಭೂತ ಸ್ವರೂಪದ ಪ್ರಗತಿಪರ ನಿರ್ಧಾರಗಳನ್ನು ಕೈಗೊಂಡು ಜನತೆಗಿತ್ತ ವಚನ ಪಾಲನೆಗೆ ನೂತನ ಸರ್ಕಾರ ಪಣತೊಟ್ಟಿದೆ. ಜನತೆಯ ಆಶೋತ್ತರಗಳ ಸಾಧನೆಯ ಗುರಿಯತ್ತ ನಿಮ್ಮ ಸರ್ಕಾರ ಮಹತ್ವ ಪೂರ್ಣ ಹೆಜ್ಜೆ ಇಟ್ಟಿದೆ.

ಆಡಳಿತಾಧಿಕಾರದ ವಿಕೇಂದ್ರೀಕರಣಕ್ಕೆ ಬದ್ಧವಾದ ನೂತನ ಸರ್ಕಾರ ಎಲ್ಲ ನಗರ ಕಾರ್ಪೊರೇಷನ್ನುಗಳು, ಪುರಸಭೆಗಳು ಹಾಗೂ ಸ್ಥಳೀಯ ಸಂಸ್ಥೆಗಳಿಗೆ ಚುನಾವಣೆ ನಡೆಸಲಿದೆ.

ಹರಿಜನ, ಗಿರಿಜನ ಹಾಗೂ ಹಿಂದುಳಿದ ವರ್ಗಗಳ ಶ್ರೇಯೋಭಿವೃದ್ಧಿ ಸರ್ಕಾರದ ಅದ್ಯ ಕರ್ತವ್ಯ — ಅವರ ಆರ್ಥಿಕ ಹಾಗೂ ಸಾಮಾಜಿಕ ಏಳಿಗೆಗಾಗಿ ಪ್ರಸ್ತುತವಾದ ನಿರ್ದಿಷ್ಟ ಸಲಹೆಗಳನ್ನು ಮಾಡಲು ಸರ್ಕಾರ, ಹಿಂದುಳಿದ ವರ್ಗಗಳ ಆಯೋಗ ಮತ್ತು ಲ್ಪಸಂಖ್ಯಾತರ ಆಯೋಗವನ್ನು ರಚಿಸಿದೆ.

ಹರಿಜನ—ಗಿರಿಜನರ ಯುವಜನಾಂಗದ ಪ್ರತಿಭಾಪುರಸ್ಕಾರಕ್ಕಾಗಿ ಪ್ರಾಯಶಃ ದೇಶದಲ್ಲೇ ಪ್ರಥಮವಾದ ವಿನೂತನ ಕ್ರಮವನ್ನು ಕೈಗೊಳ್ಳಲಾಗಿದೆ. ಅದರಂತೆ ರಾಜ್ಯದ ವಿಶ್ವವಿದ್ಯಾನಿಲಯಗಳಿಂದ, ವಿವಿಧ ವಿಷಯಗಳಲ್ಲಿ ಪದವಿ ಪಡೆದ 87 ಪ್ರತಿಭಾವಂತ ದ್ಯಾರ್ಥಿಗಳನ್ನು ಪ್ರತಿ ವರ್ಷ ಕರ್ನಾಟಕ ಸರ್ಕಾರದ ಅಧಿಕಾರಿ ವರ್ಗಕ್ಕೆ ನೇರವಾಗಿ ನೇಮಿಸಿಕೊಳ್ಳುವುದು.

'ಅಂತ್ಯೋದಯ" — ರಾಜ್ಯದ ಪ್ರತಿ ಹಳ್ಳಿಯಲ್ಲಿ ಐದು ಕಡು ಬಡಕುಟುಂಬಗಳನ್ನು ಆಯ್ಕೆ ಮಾಡಿ, ಅವರಿಗೆ ಸ್ವಾ ವ ಲಂ ಬಿಗಳಾಗಲು ಎಲ್ಲ ಸೌಲಭ್ಯ ಒದಗಿಸಿ, ಬಡತನದ ರೇಖೆಯಿಂದ ಮೇಲೆತ್ತುವ ಕ್ಷೇಮಾಭ್ಯುದಯ ಯೋಜನೆ.

ರರ್ಮಿಕರ ಕನಿಷ್ಠ ವೇತನದ ಪರಿಷ್ಕರಣೆ.

ಕೃಷಿಕಾರ್ಮಿಕರು, ಹೋಟೇಲು, ಸಿನಿಮಾ ಹಾಗೂ ಬೀಡಿ ಕೆಲಸಗಾರರು ಸೇರಿದಂತೆ ಎಲ್ಲ ಉದ್ಯಮಗಳ ಕಾರ್ಮಿಕರಿಗೆ ಅನುಕೂಲ ಕಾರ್ಮಿಕರಿಗೆಲ್ಲ ಮೇ ತಿಂಗಳ ಒಂದನೇ ತಾರೀಖು ಸಂಬಳ ಸಹಿತ ರಜೆ.

ಬಹು ದಿನಗಳ ಬೇಡಿಕೆ, ವೃತ್ತಿ ತೆರಿಗೆಯ ರದ್ದು. ತಿಂಗಳಿಗೆ 1200 ರೂಪಾಯಿಗಿಂತ ಕಡಿಮೆ ವೇತನ ಪಡೆಯುವವರು ಮತ್ತು ವರ್ಷಕ್ಕೆ ನಲವತ್ತು ಸಾವಿರ ರೂಪಾಯಿಗಿಂತ ಕಡಿಮೆ ವಹಿವಾಟು ಮಾಡುವ ವ್ಯಾಪಾರಸ್ಥರು ಇನ್ನು ಮುಂದೆ ವೃತ್ತಿ ತೆರಿಗೆ ಕೊಡಬೇಕಾಗಿಲ್ಲ.

ಬೆಲೆ ಏರಿಕೆಯನ್ನು ತಡೆಯಲು ಪರಿಣಾಮಕಾರಿ ಕ್ರಮ. ನ್ಯಾಯಬೆಲೆ ಅಂಗಡಿಗಳ ಮೂಲಕ ಮಾರಾಟ ಮಾಡುವ ಎಲ್ಲ ದರ್ಜೆಯ ಅಕ್ಕಿಯ ಬೆಲೆಯನ್ನು ಗಣನೀಯವಾಗಿ ಕಡಿಮೆ ಮಾಡಲಾಗಿದೆ.

ರೈತರ ಮುಂದಿರುವ ಹಲವಾರು ಸಮಸ್ಯೆಗಳ ನಿವಾರಣೆಯ ಮೊದಲ ಹಂತವಾಗಿ, ವಿವಿಧ ರೀತಿಯ ಸಾಲ ಮರುಪಾವತಿಯಲ್ಲಿ ಸುಮಾರು ಮುವತ್ತಾರು ಕೋಟಿ ರೂಪಾಯಿ ಪರಿಹಾರ ಕೊಡಲಾಗಿದೆ. ಸರ್ಕಾರಕ್ಕೆಸಂದಾಯವಾಗದೆ ಉಳಿದಿರುದ ಸಾಲಗಳ ಮನ್ನಾ. ಭೂಸಾರ ರಕ್ಷಣೆ ಮತ್ತು ಒಡ್ಡು ನಿರ್ಮಾಣದ ಬಾಕಿಯಲ್ಲಿ ಅರ್ಧಭಾಗವನ ನಿಯಮಿತ ಅವಧಿಯ ಒಳಗೆ ತೀರಿಸಿದರೆ ಉಳಿದರ್ಧ ಮನ್ನಾ. ಜೊತೆಗೆ ಸಹಕಾರಿ ಸಾಲಗಳ ಮರುಪಾವತಿಯಲ್ಲಿ ರಿಯಾಯಿತಿ

ರಾಜಕೀಯದಲ್ಲಿ ನೀತಿಯುತ ನಡವಳಿಕೆಯ ಸತ್ಸಂಪ್ರದಾಯಕ್ಕೆ ಮೊದಲ ಹೆಜ್ಜೆ. ಪಕ್ಷಾಂತರದ ಪಿಡುಗನ್ನು ತೆಗೆದುಹಾಕುವುದು ಪಕ್ಷಾಂತರ ನಿಷೇಧಿಸುವ ವಿಧೇಯಕವನ್ನು ತಂದಿರುವ, ದೇಶದಲ್ಲೇ ಎರಡನೆಯ ರಜ್ಯ — ಕರ್ನಾಟಕ.

ಭ್ರಷ್ಟಾಚಾರದ ಮೂಲೋತ್ಪಾಟನೆಗೆ ತೀವ್ರ ಕ್ರಮ — ಲೋಕ ಆಯುಕ್ತದ ರಚನೆ

ಹಿಂದುಳಿದ ವರ್ಗಗಳ ಕುಶಲಕರ್ಮಿಗಳ ಉಪಯೋಗಕ್ಕಾಗಿ ಸಾಧನ, ಸಲಕರಣೆಗಳನ್ನ ಒದಗಿಸುವ ಕೈಗಾರಿಕಾ ಕೇಂದ್ರಗಳನ್ನು ರಾಜ್ಯದ ವಿವಿಧ ಕಡೆ ಸ್ಥಾಪಿಸಲಾಗುವುದು.

ವೃದ್ಧಾಪ್ಯವೇತನ ಹಾಗೂ ಅಂಗವಿಕಲರಿಗೆ ಕೊಡುವ ಮಾಸಾಶನವನ್ನು ಐವತ್ತು ರೂಪಾಯಿಗೆ ಹೆಚ್ಚಿಸಲಾಗಿದೆ.

ವನತೆಯ ಕುಂದುಕೊರತೆಗಳನ್ನು ವಿಚಾರಿಸಲು ಹೊಸ ವ್ಯವಸ್ಥೆಯನ್ನೇ ರೂಪಿಸಿದೆ. ಅವಕ್ಕಾಗಿ ಪ್ರತ್ಯೇಕ ಮಂತ್ರಿ ಶಾಖೆಯನ್ನೆ ರಚಿಸಿದೆ.

ವಡವನ್ನು ಎಲ್ಲ ಮಟ್ಟದಲ್ಲೂ ಆಡಳಿತ ಭಾಷೆಯಾಗಿ ಮಾಡಿರುವುದು ಮಾತ್ರವಲ್ಲ, ಇದು ಕಳೆದ ಫೆಬ್ರವರಿ 15 ರಿಂದ ಕಡ್ಡಾಯನಾಗಿ, ಯಶಸ್ವಿಯಾಗಿ ಕಾರ್ಯಗತವಾಗುತ್ತಿದೆ.

ಪ್ರಪ್ರಥಮ ಜನತಾ ಸರ್ಕಾರ ರಚಿಸಿ ಇತಿಹಾಸದಲ್ಲಿ ಹೊಸ ಅಧ್ಯಾಯ ಪ್ರಾರಂಭಿಸಿದ ಕರ್ನಾಟಕದಲ್ಲಿ ಇಡೀ ಸಮಾಜದ ಅಭ್ಯುದಯ ಅದರಲ್ಲೂ, ಗ್ರಾಮೀಣ ಜನರ ದಲಿತ ವರ್ಗದವರ ಏಳಿಗೆ ಸಾಧನೆಯೇ ನಮ್ಮ ದೃಢ ಸಂಕಲ್ಪ.

**ಪ್ರಕಟನೆ:— ವಾರ್ತಾ ಮತ್ತು ಪ್ರಚಾರ ಇಲಾಖೆ, ಕರ್ನಾಟಕ ಸರ್ಕಾರ,**
**ಬೆಂಗಳೂರು.**

KRNN 106 PANCHAMA Fortnightly 5, May 1983 Reg. No. 2561-76

12

# ರೈತಸಂಘದ ನೆರಳಲ್ಲಿ ದಲಿತರಿಗೆ ಸಾಮಾಜಿಕ ಬಹಿಷ್ಕಾರ

. ಪಿರಿಯಾಪಟ್ಟಣ ತಾಲ್ಲೂಕು ಬಸಲಾಪುರ ಗ್ರಾಮದ ವಕ್ಕಲಿಗರು ಆ ಊರಿನ ದಲಿತರಿಗೆ ಅಂಗಡಿ ಸಾಮಾನು, ಹೋಟೆಲ್ ಮತ್ತು ಮಿಲ್ಲು ಗಳಿಗೆ ಕೂಡದಂತೆ ಬಹಿಷ್ಕರಿಸಿ ಕಿರುಕುಳ ನೀಡುತ್ತಿದ್ದಾರೆ.

ಈಗ ಹರಿಜನರು ವಕ್ಕಲಿಗರ ಬೀದಿಯಲ್ಲಿ ತಿರುಗುವಂತಿಲ್ಲ. ಅಂಗಡಿಸಾಮಾನಿಗೆ ಹೋಗದಂತೆ, ಅವರ ದನ ಕರುಗಳು ಸಹ ಊರಿನ ಒಳಗೆ ಬಾರದಂತೆ ಪಟೇಲ್ ಶೆಟ್ಟಿಗೌಡ, ತಮ್ಮೇಗೌಡ, ಕೆಂಪೇಗೌಡ, ಅಪ್ಪಣ್ಣೇಗೌಡ, ಶಿವಣ್ಣ, ಶೇಖರ, ಮುಂತಾದ ಪುಂಡರು ಹರಿಜನರಿಗೆ ಕಟ್ಟಪ್ಪಣೆ ಮಾಡಿ, ಅವರ ಮನೆಗಳ ಮೇಲೆ ರಾತ್ರಿ ಹೊತ್ತಿನಲ್ಲಿ ಕಲ್ಲುಗಳನ್ನು ಹೊಡೆಸುತ್ತಿದ್ದಾರೆ.

ಈ ತರ ವಕ್ಕಲಿಗರು ಹರಿಜನರ ಮೇಲೆ ಬಹಿಷ್ಕಾರಹಾಕಿ ದ್ವೇಷಕಾರುವುದಕ್ಕೆ ಅನೇಕ ಸಣ್ಣಪುಟ್ಟ ಕಾರಣಗಳಿಗಿಂತ ಆ ಊರಿನ ವಕ್ಕಲಿಗರು ಇತ್ತೀಚೆಗೆ ಮಾಡಿಕೊಂಡಿರುವ ರೈತಸಂಘದ ಪ್ರಭಾವವು ಮುಖ್ಯ ಕಾರಣವಾಗಿದೆ.

ಬಸಲಾಪುರದ ರೈತಸಂಘದವರು ಕಟ್ಟುತ್ತಿರುವ ಕಮ್ಯೂನಿಟಿಹಾಲ್‌ನ ಕಲ್ಲು ಮಣ್ಣು, ಮತ್ತು ಗಾರೆ ಕೆಲಸವನ್ನು ಹರಿಜನರು ವಹಿಸಿಕೊಂಡು, ಕಟ್ಟಡಕ್ಕಾಗಿ ತಲಾ 25 ರೂಗಳನ್ನು ಸಹಾಯಾರ್ಥವಾಗಿ ಕೊಡಬೇಕೆಂದು ರೈತಮುಖಂಡರು ಹರಿಜನರನ್ನು ನ್ಯಾಯಕ್ಕೆ ಕರೆದು ಕೇಳಿದಾಗ, ರೈತಸಂಘದೊಳಗೆ ಹರಿಜನ ಸದಸ್ಯರು ಒಬ್ಬರೂ ಇಲ್ಲದ ಕಾರಣಕ್ಕಾಗಿ, ರೈತಮುಖಂಡರು ವಿದಿಸಿದ್ದ ಹಣವನ್ನ ಕೊಡಲು ನಿರಾಕರಿಸಿದ ಹರಿಜನರನ್ನ ರೈತಸಂಘದ ಮುಖಂಡನಾದ ಸಣ್ಣೇಗೌಡ ಎಂಬುವನು ಹರಿಜನರಿಗೆ ತುಚ್ಛವಾಗಿ ಬೈದು, ಕಳುಹಿಸಿದಂದಿನಿಂದ ಹರಿಜನರಿಗೆ ಕಿರುಕುಳ ಪ್ರಾರಂಭವಾಗಿ ಅವರ ಮನೆಗಳ ಮೇಲೆ ಹೆಚ್ಚು ಹೆಚ್ಚು ಕಲ್ಲುಗಳು ಬೀಳಲು ಪ್ರಾರಂಭವಾದಾಗ, ಹರಿಜನರು ಊರಿನ ಪಟೇಲ್ ಶೆಟ್ಟಿಗೌಡರನ್ನು ಕರೆದು ಮನೆಮೇಲೆ ಬಿದ್ದಿರುವ ಕಲ್ಲುಗಳನ್ನು ತೋರಿಸಲು ಕಲ್ಲುಗಳನ್ನು ಕಣ್ಣಾರೆ ನೋಡಿದ ಪಟೇಲರು ಇದೆಲ್ಲ ದೇವರ ಚೇಷ್ಟೆ; ಎಂದು ದೇವರ ಮೇಲೆ ಭಾರಹಾಕಿ ಪೋಲೀಸರಿಗೆ ದೂರುಕೊಡದಂತೆ ಮಾಡಿದರು.

ದಿನಾಂಕ 29-3-83 ರಂದು ಹರಿಜನ ದೇವಮ್ಮ ಎಂಬುವ ಹೆಂಗಸು, ವಕ್ಕಲುಗೇರಿಯಲ್ಲಿ ಹೋಗುತ್ತಿದ್ದಾಗ ರೈತ ಮುಖಂಡರಾದ ಸಣ್ಣೆಗೌಡರು ಅರಳಿಕಟ್ಟೆ ಹತ್ತಿರವೇ ಆಕೆಯನ್ನು ತಡೆದು ಬಹಿಷ್ಕಾರ ಹಾಕಿದ್ದರೂ, ಏಕೆ ಊರಿಗೆ ಬಂದೆ ಎಂದು, ಊರ ಒಳಗೆ ಸೇರಿಸಲಿಲ್ಲ.

4-4-83 ರಂದು ಹರಿಜನ ಪುಟ್ಟರಾಜು ಎಂಬುವವನು ನಾಗರಾಜು ಎಂಬುವವರ ಅಂಗಡಿಯಿಂದ ಸಾಮಾನುಗಳನ್ನು ತೆಗೆದುಕೊಂಡು ಬರುವಾಗ, ಸಂಜೀವಯ್ಯನವರ ಮಗ ಬಸವ ಎಂಬುವವನು ಬಹಿಷ್ಕಾರ ಹಾಕಿರುವ ಹೊಲೆರಿಗೆ ಯಾಕೆ ಅಂಗಡಿ ಸಾಮಾನುಕೊಟ್ಟೆ ಎಂದು ಅಂಗಡಿಯವನ ಮೇಲೆ ಗಲಾಟೆಮಾಡಿ, ಪುಟ್ಟರಾಜುವಿನ ಕೈಯಲ್ಲಿದ್ದ ಸಾಮಾನುಗಳನ್ನು ಕಿತ್ತು ಅಂಗಡಿಗೆ. ವಾಪಾಸ್ ಇಡಿಸಿದರು. ಅಂದಿನಿಂದ ಬಸಲಾಪುರದ ಹರಿಜನರಿಗೆ, ಅಂಗಡಿಯಲ್ಲಿ ಸಾಮಾನು ದೊರೆಯುತ್ತಿಲ್ಲ. ಮಿಲ್ಲುಗಳಲ್ಲಿ ರಾಗಿಮಾಡಿ ಕೊಡುತ್ತಾ ಇಲ್ಲ

ಹೀಗೆ ಕಳೆದ ಎರಡು ತಿಂಗಳಿಂದಲೂ ಬಹಿಷ್ಕಾರದ ನರಕಕ್ಕೆ ಸಿಕ್ಕಿರುವ ಬಸಲಾಪುರದ ದಲಿತರ ಸ್ಥಿತಿ ಮತ್ತು ಇನ್ನೊಂದು ಕಡೆ ಕರ್ನಾಟಕ ರೈತ ಸಂಘದ ಸಮಾನತಾ ಆದರ್ಶಗಳು ಪರಸ್ಪರ ವಿರುದ್ಧವಲ್ಲವೆ ? ಇದನ್ನು ಕೇಳುವವರು ಯಾರು ?

—ಆರ್. ಎಸ್. ದೊಡ್ಡಣ್ಣ

## ಜಾತಿ ಮೀರಿದ ಪ್ರೀತಿ

ರಮಾಪುರವೆಂಬುದೊಂದು ಹಳ್ಳಿ. ಅಲ್ಲಿಯ ರಾಮೇಗೌಡ, ಸುತ್ತಮುತ್ತಲ ಪ್ರದೇಶಕ್ಕೆಲ್ಲ ಹೆಸರುವಾಸಿ. ಹತ್ತಿಪ್ಪತ್ತು ಎಕರೆ ಅಡಿಕೆ, ತೆಂಗಿನ ತೋಟ, ನಾಲ್ಕೈದು ಪಂಪ್‌ಸೆಟ್‌ಗಳು, ದಿನವೂ ಇಪ್ಪತ್ತೈದು ಮುವತ್ತು ಆಳುಗಳು ಕೆಲಸಮಾಡುತ್ತಿರುತ್ತಾರೆ.

ರಾಮೇಗೌಡರ ಒಬ್ಬನೇ ಮಗನಾದ ಚನ್ನೇಗೌಡ ಬೆಂಗಳೂರಿನ ಕಾಲೇಜೊಂದರಲ್ಲಿ ಕೊನೆಯ ವರ್ಷದ ಬಿ. ಎ. ಓದುತ್ತಿರುತ್ತಾನೆ. ತನ್ನ ಮಗ ಫಸ್ಟ್‌ಕ್ಲಾಸಿನಲ್ಲಿ ಪಾಸಾಗಿರುವ ವಿಷಯ ತಿಳಿದ ಗೌಡ ಮಗನನ್ನು ಆದರದಿಂದ ಬರಮಾಡಿಕೊಂಡು, ಅವನನ್ನ ಊರಿನಲೆಲ್ಲಾ ಮೆರವಣಿಗೆ ಮಾಡಿಸಿ ತನ್ನ ಶ್ರೀಮಂತಿಕೆಯನ್ನು ತೋರಿಸಿಕೊಳ್ಳುತ್ತಾನೆ. ಆ ದಿನ ಊರಿನ ಜನಕೆಲ್ಲಾ ಭೋಜನವೇರ್ಪಡಿಸಿರುತ್ತಾನೆ. ಗೌಡನನ್ನು ಜನ ಹೊಗಳಿ ಕೊಂಡಾಡುತ್ತಾರೆ.

ಇದೆಲ್ಲ ಮುಗಿದ ಮೇಲೆ ಚನ್ನೇಗೌಡನ ಮದುವೆಯ ಬಗ್ಗೆ ಚರ್ಚಿಸುತ್ತಾರೆ. ನಾನು ಒಂದು ಹುಡುಗಿಯನ್ನು ಒಪ್ಪಿದ್ದೇನೆ. ಆ ಹುಡುಗಿ ಹರಿಜನದವಳು ಎಂದು ಚನ್ನೇಗೌಡ ಹೇಳಿದಾಗ, ಕೋಪಗೊಂಡ ರಾಮೇಗೌಡ ಅವನನ್ನ ತನ್ನ ಮನೆಯಿಂದ ಹೊರ ಹಾಕುತ್ತಾನೆ.

ಇತ್ತ ಬೆಂಗಳೂರಿನಲ್ಲಿ ಸರ್ಕಾರಿ ಕೆಲಸವೊಂದರಲ್ಲಿದ್ದ ಹನುಮಯ್ಯನ ಮಗಳು ಲೀಲಾ ಏಕೈಕ ಪುತ್ರಿ. ಇವಳು ಚನ್ನೇಗೌಡನನ್ನೇ ನಂಬಿಕೊಂಡು ಅವನಲ್ಲೇ ಅನುರಕ್ತಳಾಗಿರುತ್ತಾಳೆ. ಮನೆಯಲ್ಲಿ ಮದುವೆಯ ಪ್ರಸ್ತಾಪಬಂದಾಗ ತಾನು ಮೆಚ್ಚಿರುವ ಹುಡುಗನ ಬಗ್ಗೆ ಹೇಳುತ್ತಾಳೆ. ಹನುಮಯ್ಯನಿಗೆ ಈ ತರಹ ಸಂಬಂಧ ಸರಿಬೀಳುವುದಿಲ್ಲ. ಈ ಸಂಬಂಧ ಬೇಡವೆಂದು ಹೇಳುತ್ತಾನೆ. ಇದನ್ನು ಒಪ್ಪದ ಮಗಳನ್ನು ಮನೆಯಿಂದ ಬಹಿಷ್ಕರಿಸುತ್ತಾನೆ.

ಮನೆಯನ್ನು ಬಿಟ್ಟುಬಂದ ಲೀಲಾ ಸೀದಾ ಚನ್ನೇಗೌಡನ ಮನೆಗೆ ಬಂದು ಬಿಡುತ್ತಾಳೆ. ಅದೇ ವೇಳೆಗೆ ಚನ್ನೇಗೌಡ ಊರಿನಿಂದ ಬಂದಿರುತ್ತಾನೆ. ಇಬ್ಬರೂ ತಮ್ಮ ಮನೆಯಲ್ಲಿ ನಡೆದ ಸಂಭಾಷಣೆಯ ಬಗ್ಗೆ ಚರ್ಚಿಸಿ ತಾವಿಬ್ಬರೂ ಸ್ವತಂತ್ರ್ಯವಾಗಿ ಬಾಳೋಣ ಎಂದು ತೀರ್ಮಾನಿಸಿ, ಒಂದು ನೌಕರಿಯನ್ನಿಡಿದು ರಿಜಸ್ಟರ್ಡ್ ಮ್ಯಾರೇಜ್ ಮಾಡಿಕೊಳ್ಳುತ್ತಾರೆ.

ಈ ವಿಷಯ ರಾಮೇಗೌಡನಿಗೂ ಹನುಮಯ್ಯನಿಗೂ ತಿಳಿದು ಒಳಗೊಳಗೆ ಪಶ್ಚತ್ತಾಪ ಪಡುತ್ತಾರೆ.

ಮದುವೆಯಾಗಿ ಕೆಲವು ವರ್ಷಗಳು ಕಳೆಯುತ್ತವೆ. ಈ ಮಧ್ಯೆ ಲೀಲಾಳು ಒಂದು ಗಂಡು ಮಗುವನ್ನು ಹಡೆಯುತ್ತಾಳೆ. ಈ ವಿಷಯ ಹನುಮಯ್ಯನವರಿಗೂ, ರಾಮೇಗೌಡರಿಗೂ ತಿಳಿಯುತ್ತದೆ. ಅಪರಲ್ಲಿ ಕರುಣೆಯುಟ್ಟಿ ಗುಟ್ಟಾಗಿ ಬಂದು ಮಗುವನ್ನು ನೋಡಿಕೊಂಡು ಹೋಗುತ್ತಿರುತ್ತಾರೆ ಹೀಗೆ ಕಾಲಕಳೆಯುತ್ತಿರಬೇಕಾದರೆ, ಒಂದು ದಿನ ರಾಮೇಗೌಡ ಮಗುವನು ನೋಡಿಕೊಂಡು ಹೋಗಲು ಬಂದು ಮನೆಯಲ್ಲಿದ್ದ ವೇಳೆಯಲ್ಲಿಯೇ ಮಗುವನ್ನು ನೋಡಲು ಹನುಮಯ್ಯನವರೂ ಬರುತ್ತಾರೆ. ಲೀಲಾ ತನ್ನ ತಂದೆಯನ್ನ ತನ್ನ ಮಾವನವರಿಗೆ ಪರಿಚಯ ಮಾಡಿಕೊಡುತ್ತಾಳೆ ತನ್ನ ತಂದೆಯನ್ನ ಚನ್ನೇಗೌಡ ಹನುಮಯ್ಯನವರಿಗ ಪರಿಚಯ ಮಾಡಿಕೊಡುತ್ತಾನೆ. ಆಗ ಅವರು ಒಬ್ಬರಿಗೊಬ್ಬರು ತಬ್ಬಿಕೊಂಡು ತಮ್ಮ ಆನಂದ ವ್ಯಕ್ತಪಡಿಸುತ್ತಾರೆ. ನಾವು ಹೀಗೆ ಮಾಡಬಾರದಾಗಿತ್ತು. ಜಾತಿ ಜಾತಿ ಅಂತ ಕಿತ್ತಾಡಬಾರದು ಯಾವ ಜಾತೀನೂ ಇಲ್ಲ, ಗಂಡು ಹೆಣ್ಣು ಎಂದು ಎರಡೇ ಜಾತಿ. ನೋಡಿ ನಾವು ನಮ್ಮ ಮಕ್ಕಳನ್ನ ಮನೆಗೆ ಕರೆದುಕೊಂಡು ಹೋಗೋಣ ಅವರನ್ನು ಸ್ವತಂತ್ರ್ಯವಾಗಿ ಬದುಕಲು ಬಿಡೋಣ ಎಂದು ರಾಮೇಗೌಡರೆನ್ನುತ್ತಾರೆ. ಇದಕ್ಕೆ ಹನುಮಯ್ಯನವರೂ ಸಮ್ಮತಿ ನೀಡುತ್ತಾರೆ.

—ಡಿ. ವೆಂಕಟೇಶ

ಸಂಪಾದಕ, ಪ್ರಕಾಶಕ : ಗೋವಿಂದಯ್ಯ, ವಿನಯ ಪ್ರಿಂಟರ್ಸ್ 2514, ಕೆ. ಜಿ. ಕೊಪ್ಪಲು, ಮೈಸೂರು-14.